(13)

# ಅಚಲ

ಸೆಪ್ಟೆಂಬರ್ - ನವೆಂಬರ್ 1992

ಬೆಲೆ ರೂ. 1-50





"ಅಚಲ" ಪತ್ರಿಕೆಯನ್ನು ಪಡೆಯ ಬಯಸುವವರು ದಯವಿಟ್ಟು ಕೆಳಗಿನ ವಿಳಾಸಕ್ಕೆ ಹದಿನಾರು ರೂಪಾಯಿಗಳನ್ನು ಎಂ.ಓ./ಡ್ರಾಫ್ಟ್ ಮೂಲಕ ಕಳುಹಿಸಿ ಕೂಪನ್‌ನಲ್ಲಿ ತಮ್ಮ ವಿಳಾಸವನ್ನು ಸ್ಪಷ್ಟವಾಗಿ ಬರೆಯಬೇಕು. ಚಂದಾದಾರರು ತಮ್ಮ ವಿಳಾಸ ಬದಲಾದರೆ ಕೂಡಲೇ ಕಾರ್ಡಿನಲ್ಲಿ ಬರೆದು ತಿಳಿಸಬೇಕು.



ಚಂದಾ ವಿವರ

| | |
|---|---|
| ವಾರ್ಷಿಕ ಚಂದಾ : | ರೂ. 15-00 |
| ಬಿಡಿ ಪ್ರತಿ : | ರೂ. 1-50 |
| ವಿಶೇಷ ಪ್ರತಿ : | ರೂ. 5-00 |
| ಆಜೀವ ಚಂದಾ | |
| ವ್ಯಕ್ತಿಗಳಿಗೆ : | ರೂ. 150-00 |
| ಸಂಸ್ಥೆಗಳಿಗೆ : | ರೂ. 200-00 |



Printed at : PRINTSWELL, 78, 3rd Main Road Nagappa Block, Srirampuram, Bangalore-21 & Published by Dr. G. Ramakrishna on behalf of Jagruthi Mahila Adhyayana Kendra
26, I Main, 11th Cross, Vyalikaval, Bangalore-3
Editor : N. GAYATRI



## ಡಾ॥ ನಳಿನಿಮೂರ್ತಿ ಇನ್ನಿಲ್ಲ

ಡಾ॥ ನಳಿನಿ ಮೂರ್ತಿ ಇಲ್ಲವಾದರು ಎಂದರೆ ಯಾರೂ ನಂಬುವುದಿಲ್ಲ, ಮೊನ್ನೆ ಮೊನ್ನೆಯಲ್ಲಾ, ಬೆಂಗಳೂರಿನಲ್ಲಿ ಎಲ್ಲರೊಂದಿಗೆ ಬೆರೆತು ನಗು ನಗುತ್ತಾ, ಕೈಬೀಸಿ ಹೋದ ಅವರ ನೆನಪು ಇನ್ನು ಯಾರಿಗೂ ಮಾಸಿಲ್ಲ. ಚೈತನ್ಯದ ಚಿಲುಮೆಯಾಗಿ, ಸ್ನೇಹಕ್ಕೆ ಇನ್ನೊಂದು ಹೆಸರಾಗಿ, ಸೌಜನ್ಯವೇ ಸಾಕಾರವಾದ ಈ ಹಸನ್ಮುಖಿಯ ಸಾವನ್ನು ನಂಬುವುದಾದರೂ ಹೇಗೆ ? ಕಳೆದ ಮೂರು ದಶಕಗಳಿಂದ ವಿದೇಶದಲ್ಲಿಯೇ ನೆಲಸಿದ್ದರೂ

(29ನೇ ಪುಟ ನೋಡಿ)

## ಕಂಬನಿ

ಕರ್ನಾಟಕದ ಹಿರಿಯ ಚಿತ್ರ ಕಲಾವಿದರೂ, ಆಚಾರ್ಯ, ಚಿತ್ರ ಕಲಾ ಪರಿಷತ್ತಿನ ಸ್ಥಾಪಕರು ಮತ್ತು ಜೀವನಾಡಿಯಾಗಿದ್ದ ಪಕ್ವ ಜೀವಿ ಶ್ರೀಯುತ ಎಂ. ಟಿ. ವಿ. ಆಚಾರ್ಯರು ಸೆಪ್ಟೆಂಬರ್ 5 ರಂದು ನಿಧನರಾದರು. 'ಅಚಲ' ಪತ್ರಿಕೆಯೊಂದಿಗೆ ನಿಕಟ ಸಂಪರ್ಕವಿಟ್ಟುಕೊಂಡಿದ್ದ ಆಚಾರ್ಯರು 'ಅಚಲ'ದ ಹಿತೈಷಿಗಳಾಗಿದ್ದರು. ಅವರು ರಚಿಸಿದ ಚಿತ್ರವೊಂದು 'ಅಚಲ' ಪತ್ರಿಕೆಯ ಮುಖಪುಟವಾಗಿ ಒಂದು ವರ್ಷ ಕಾಲ ರಾರಾಜಿಸಿತು. ಆಚಾರ್ಯರ ಕಲಾ ಸಾಧನೆ ಮತ್ತು ಹೃದಯವಂತಿಕೆಯನ್ನು ಸ್ಮರಿಸುತ್ತಾ ಅವರ ನಿಧನಕ್ಕೆ ಅಚಲ ಕಂಬನಿ ಮಿಡಿಯುತ್ತದೆ.

# ಇತಿಹಾಸದಲ್ಲಿ ಕಳೆದು ಹೋದವರು

ಈ ನವೆಂಬರ್ 7ನೇ ತಾರೀಖಿಗೆ ಮೇರಿ ಕ್ಯೂರಿ ಜನಿಸಿ 125 ವರ್ಷಗಳು. ಕಡು ಬಡತನದಲ್ಲಿ, ಪರಾಡಳಿತದಲ್ಲಿ, ನೊಂದ ಪೋಲೆಂಡ್ ದೇಶದಲ್ಲಿ, ಮಹಿಳೆಯರಿಗೆ ವಿಶ್ವವಿದ್ಯಾಲಯದಲ್ಲಿ ಪ್ರವೇಶವಿಲ್ಲದಂಥಾ ಪರಿಸರದಲ್ಲಿ, ಒಂದೂಕಾಲು ಶತಮಾನದಷ್ಟು ಹಿಂದೆ ಜನಿಸಿದ ಮಹಿಳೆಯೊಬ್ಬಳು, ಭೌತಶಾಸ್ತ್ರ, ರಸಾಯನ ಶಾಸ್ತ್ರಗಳೆರಡರಲ್ಲೂ ನೋಬೆಲ್ ಪಾರಿತೋಷಿಕ ಪಡೆದದ್ದು, 'ರೇಡಿಯಂ' ಕಂಡು ಹಿಡಿದಿದ್ದು 'ವಿಕಿರಣಶೀಲತೆ'ಯ ಅದ್ಭುತ ರಂಗಕ್ಕೆ ಜನ್ಮ ಕೊಟ್ಟದ್ದು ಅಚ್ಚರಿ ಎನಿಸದೆ ಇರದು. ಅಂಥಾ ಪ್ರತಿಕೂಲ ಪರಿಸ್ಥಿತಿಯಲ್ಲೂ ಮೇರಿ ಜಗಿದು ಗೆಲ್ಲಲು ಆಕೆಯ ವಿಜ್ಞಾನದಲ್ಲಿಯ ತೀವ್ರ ಆಸಕ್ತಿ, ಕಟು ಪರಿಶ್ರಮದೊಡನೆ, ಆಕೆಯ ತಾಯಿ-ತಂದೆ-ಪತಿಯ ಸಹಕಾರ, ವಿಶಾಲ ಮನೋಭಾವಗಳೂ ಕಾರಣವಾಗಿದ್ದವು.

ಮೇರಿಯ ತಾಯಿ ಖಾಸಗಿ ಶಾಲೆಯಲ್ಲಿ ಉತ್ತಮ ವ್ಯಾಸಂಗ ಪಡೆದು, ಅದೇ ಸಂಸ್ಥೆಯಲ್ಲಿ ಪ್ರೊಫೆಸರ್ ಆಗಿ ಸೇರಿದಾಕೆ. ತಂದೆ ಭೌತಶಾಸ್ತ್ರ ಮತ್ತು ಗಣಿತದ ಪ್ರಾಧ್ಯಾಪಕ. ಈ ವಿದ್ಯಾವಂತ ದುಡಿವ ದಂಪತಿಗಳ ಐವರು ಮಕ್ಕಳಲ್ಲಿ ಕಿರಿಯವಳು ಮೇರಿ. ತಾಯಿ ಸತ್ತಾಗ ಮೇರಿಗಿನ್ನೂ ಹನ್ನೊಂದು ವರ್ಷ. ಆ ತಂದೆ ಗಂಡು-ಹೆಣ್ಣು ಮಕ್ಕಳ ಭೇದವಿಲ್ಲದೆ ಸಮಾನವಾಗಿ ಬೆಳಸಿದ್ದಲ್ಲದೆ, ಅವರಲ್ಲಿ ಸಾಹಿತ್ಯ, ಗಣಿತ, ವಿಜ್ಞಾನಗಳ ಆಸಕ್ತಿಯನ್ನು ತುಂಬಿದ. ತನ್ನ ಕಾಲದ ಹೆಣ್ಣು ಮಕ್ಕಳಿಗೆ ದಕ್ಕಿರದ ಅಪರೂಪದ ಬೌದ್ಧಿಕ ಪರಿಸರ ಮೇರಿಯ ಪಾಲಿಗಿತ್ತು. ತನ್ನ ಹೆಣ್ಣು ಮಕ್ಕಳಿಗೆ ಬಯಸಿದ ಉನ್ನತ ವಿದ್ಯಾಭ್ಯಾಸವನ್ನು ಕೊಡಲಾರದ ತನ್ನ ಬಡತನಕ್ಕೆ ಪರಿತಪಿಸಿದ ತಂದೆ, ಆ ಹೆಣ್ಣು ಮಕ್ಕಳ ವ್ಯಾಸಂಗಕ್ಕಾಗಿ ಇಳಿ ವಯಸ್ಸಿನಲ್ಲೂ 'ಸುಧಾರಣಾ ಶಾಲೆ'ಯ ದುಷ್ಕರ ಹುದ್ದೆಯನ್ನೂ ಒಪ್ಪಿ ದುಡಿದಾತ. ಈ ತಂದೆ-ಮಕ್ಕಳ ಸಂಬಂಧ ಸೋದರ-ಸೋದರಿಯರ ನಡುವಿನ ಪ್ರೀತಿ ಎಂಥಾ ಸಮಯದಲ್ಲೂ, ನಡುವೆ ನಿಂತ ಮೈಲಿಗಳ ಲೆಕ್ಕಿಸದೆ ಬಂದೊದಗಿತ್ತು, ಪರಸ್ಪರರ ಬದುಕಿಗೆ ಮಹತ್ವಾಕಾಂಕ್ಷೆಗೆ ಆಸರೆಯಾಗಿತ್ತು.

ಮೇರಿಯ ಅದೃಷ್ಟಕ್ಕೆ ಪತಿಯಾಗಿ ಬಂದ ಪಿಯರ್, ಸಾಮಾನ್ಯ ಜನರ ಹಮ್ಮು, ಬಿಮ್ಮು, ಅಸೂಯೆ, ಅಹಂಕಾರಗಳಿಲ್ಲದ ನಿಜವಾದ ವಿಜ್ಞಾನಿ. ಆದಾಗಲೇ ಪ್ರಸಿದ್ಧ ಭೌತಶಾಸ್ತ್ರಜ್ಞನೆನಿಸಿಕೊಂಡಿದ್ದರೂ, ಮೇರಿಯ ಸಂಶೋಧನೆಯ ಮಹತ್ವ ಅರಿವಾದೊಡನೆ ಸ್ವಂತ ಸಂಶೋಧನೆಯ ತೊರೆದು, ಮೇರಿಯ 'ರೇಡಿಯಂ' ಹುಡುಕಾಟಕ್ಕೆ

ಜೊತೆಯಾದ. ಅವರ ಪ್ರತಿ ಪ್ರಕಟಣೆ 'ನಾವು ಕಂಡು ಹಿಡಿದ ...' 'ನಾವು ಕಂಡಂತೆ....' ಎಂದೇ ಆರಂಭವಾಗಿ ಸರಿ ಸಮಾನ ಸಾಂಗತ್ಯವ ಪ್ರತಿಬಿಂಬಿಸಿದವು. ಮೇರಿಯ ಪ್ರತಿಭೆ, ಪರಿಶ್ರಮಕ್ಕೆ ಪೂರ್ಣ ನ್ಯಾಯ ಒದಗಿಸಿದ ವ್ಯಕ್ತಿ ಪಿಯರ್ ಕ್ಯೂರಿ.

ಒಂದು ಕಾಲಕ್ಕೆ ಮಹಿಳೆಯರಿಗೆ ವಿಶ್ವವಿದ್ಯಾಲಯಗಳಲ್ಲಿ ಪ್ರವೇಶವಿರಲಿಲ್ಲ. ವೈಜ್ಞಾನಿಕ ಸಂಘ, ಸಂಸ್ಥೆ, ಅಕಾಡೆಮಿಗಳಿಗೆ ಸದಸ್ಯರಾಗುವ ಅವಕಾಶವಿರಲಿಲ್ಲ. ಕಡೆಗೆ ತಮ್ಮ ಅನ್ವೇಷಣೆಗಳ ತಮ್ಮದೇ ಹೆಸರಲ್ಲಿ ಪೇಟೆಂಟ್ ಮಾಡುವ ಅಧಿಕಾರವೂ ಬಹಳ ಕಾಲದವರೆಗೂ ಇರಲಿಲ್ಲ. ಹೀಗಿದ್ದೂ ವಿಜ್ಞಾನ ರಂಗಕ್ಕೆ ಲಗ್ಗೆ ಇಟ್ಟ ಮೇಧಾವಿ ಮಹಿಳೆಯರಿದ್ದಾರೆ. ಇಂದು ವಿಜ್ಞಾನ-ತಂತ್ರ ಜ್ಞಾನದ ಬಾಗಿಲು ಮಹಿಳೆಯರಿಗೆ ತೆರೆದಿದೆ. ಆದರೂ ಈ ರಂಗಗಳಲ್ಲಿ ಮಹಿಳೆಯರ ಸಂಖ್ಯೆ ಗಮನಾರ್ಹವಾಗಿ ಕಡಿಮೆ ಇದೆ. ಇಂದಿಗೂ ಹೆಣ್ಣು ಮಕ್ಕಳಿಗೆ ವಿಜ್ಞಾನ ಒಗ್ಗುವುದಿಲ್ಲವೆನ್ನುವವರಿದ್ದಾರೆ. ತಾಂತ್ರಿಕ ರಂಗಗಳು ದುಬಾರಿ ಎಂದು, ಒಂದು ಡಿಗ್ರಿ ಮುಗಿಸಿ ಮದುವೆ ಮಾಡಿ ಜವಾಬ್ದಾರಿ ಕಳಕೊಳ್ಳ ಬಯಸುವ ತಾಯ್ತಂದೆಯರೇ ಹೆಚ್ಚಿದ್ದಾರೆ. ಇಂಥಹುದೇ ವಾತಾವರಣದಲ್ಲಿ ಬೆಳೆದ ಹುಡುಗಿಯರು, ಮಡದಿ–ಮಾತೆಯಾಗುವುದೇ ಬದುಕಿನ ಪರಮ ಧ್ಯೇಯವೆಂದು ನಂಬುತ್ತಾರೆ. ಮತ್ತಷ್ಟು ಜನ ವಿವಾಹವಾದೊಡನೆ ಪತಿಯ ಮನೋಭಾವದಿಂದಲೋ, ಮನೆಯವರ ಅಸಹಕಾರದಿಂದಲೋ, ಇಂಥ ರಂಗಗಳ ಒತ್ತಡಗಳ ನಿಭಾಯಿಸದೆ ಹಿಂದೆ ಬೀಳುತ್ತಾರೆ. ವಿಜ್ಞಾನ ಸಂಶೋಧನೆಯಂಥ ವೃತ್ತಿ ರಂಗದಲ್ಲಿ ಯಶಸ್ವಿಯಾದವರು ಸುಖೀ ಕೌಟುಂಬಿಕ ಜೀವನಕ್ಕೆ ಹೊರತಾಗುತ್ತಾರೆಂಬ ಭಯ ಹಲವರಗಿದೆ. ಮೇರಿ ಕ್ಯೂರಿ ನಮಗೆ ಮಾದರಿಯಾಗುವುದು ಇಲ್ಲಿಯೇ. ಮೇರಿಗೆಂದೂ ವಿವಾಹ-ವಿಜ್ಞಾನಗಳ ನಡುವೆ ಆಯ್ದುಕೊಳ್ಳುವ ವಿಚಾರವೇ ಬಂದಿರಲಿಲ್ಲ. ಆಕೆ ಮಡದಿ–ಮಾತೆ-ವಿಜ್ಞಾನಿ ಅಷ್ಟೇ ಅಲ್ಲ ಶ್ರೇಷ್ಠ ಮಟ್ಟದ ಮಾನವತಾವಾದಿ.

ಮೇರಿಕ್ಯೂರಿಯ ಉದಾಹರಣೆಯನ್ನು ಎದುರಿಗಿಟ್ಟುಕೊಂಡು ಯಾವ ಹೆಣ್ಣು ಮಗುವು ವಿಜ್ಞಾನ ರಂಗಕ್ಕೆ ಹೆಜ್ಜೆ ಇಡಲು ಅಳುಕಬೇಕಿಲ್ಲ, ಯಾವ ತಾಯಿ-ತಂದೆಯರೂ ಹಿಂಜರಿಯಬೇಕಿಲ್ಲ. ಮೇರಿ ಕ್ಯೂರಿ ಒಂದು ಅಪವಾದವಲ್ಲ. ಮೇರಿ ಕ್ಯೂರಿಗೂ ಹಿಂದೆ, ಮೇರಿ ಕ್ಯೂರಿಯ ನಂತರವೂ, ಮಹಿಳಾ ವಿಜ್ಞಾನಿಗಳ ಅದ್ಭುತ ಪರಂಪರೆ ಇದೆ. ಚರಿತ್ರೆಯಲ್ಲಿ ಅದೃಶ್ಯರಾದ, ಇತಿಹಾಸದಲ್ಲಿ ಕಳೆದು ಹೋದ ನೂರಾರು ಮಹಿಳಾ ವಿಜ್ಞಾನಿಗಳ ಜೀವನ ಕಥನ ನಮಗೆ ಸ್ಫೂರ್ತಿಯಾಗಬಲ್ಲದು. 'ಅಚಲ'ದ ಈ ವಿಶೇಷಾಂಕ ಆ ಪರಂಪರೆಯ ಗುರುತಿಸುವತ್ತ ಒಂದು ಸಣ್ಣ ಯತ್ನ.

ನೇಮಿಚಂದ್ರ

# ಮಹಿಳೆ ಮತ್ತು ವಿಜ್ಞಾನ

❀ ನೇಮಿಚಂದ್ರ

ಇಪ್ಪತ್ತನೇ ಶತಮಾನದ ಆದಿಭಾಗ.... ಮೇರಿಕ್ಯೂರಿ ತನ್ನ ಜೀವಿತ ಕಾಲದಲ್ಲೇ ಕಥೆಯಾಗಿದ್ದಳು. ಯಾವ ಸುವ್ಯವಸ್ಥಿತ ಪ್ರಯೋಗ ಶಾಲೆಯೂ ಇಲ್ಲದೆ, ಕನಿಷ್ಠ ಅನುಕೂಲಗಳೂ ಇಲ್ಲದ ಮುರುಕು ಕೊಟ್ಟಿಗೆಯಲ್ಲಿ ಆಕೆ 'ರೇಡಿಯಂ' ಕಂಡು ಹಿಡಿದಿದ್ದು ಸಾಹಸ ಗಾಥೆಯಾಗಿತ್ತು. 'ರೇಡಿಯೋ ಆಕ್ಟಿವಿಟಿ' ಎಂಬ ಹೊಚ್ಚ ಹೊಸ ರಂಗಕ್ಕೆ ಜನ್ಮ ಕೊಟ್ಟಿದ್ದಳು. ವಿಜ್ಞಾನದ ಎರಡು ವಿಭಾಗಗಳಲ್ಲಿ ನೋಬೆಲ್ ಪಾರಿತೋಷಕ ಪಡೆದ ಮಹಿಳೆ. ಮೇರಿಯ ಪ್ರಸಿದ್ಧಿ ದೇಶ-ವಿದೇಶಗಳಲ್ಲಿ ಹಬ್ಬಿತ್ತು. ಗೌರವ ಸೂಚಕ ಡಿಗ್ರಿಗಳು, ಪ್ರಶಸ್ತಿಗಳು ಎಣಿಕೆ ತಪ್ಪುವಂತಿದ್ದವು. ಆದರೆ 'ಫ್ರಾನ್ಸ್‌ನ ವಿಜ್ಞಾನದ ಅಕಾಡೆಮಿ' ಮೇರಿಯನ್ನು ಹೆಣ್ಣೆಂಬ ಒಂದೇ ಕಾರಣಕ್ಕೆ ಪ್ರವೇಶ ನಿರಾಕರಿಸಿತು. 'ಫ್ರಾನ್ಸ್‌ನ ವಿಜ್ಞಾನದ ಅಕಾಡೆಮಿಯೊಳಗೆ ಹೆಂಗಸರಿಗೆ ಸ್ಥಳವಿಲ್ಲ' ಎಂದು ನಿರ್ದಾಕ್ಷಿಣ್ಯವಾಗಿ ನಿರ್ಲಜ್ಜೆಯಿಂದ ಘೋಷಿಸಿತು. ವಿಜ್ಞಾನ ಮತ್ತು ಮಾನವತಾವಾದದ ಶ್ರೇಷ್ಠ ಉದಾಹರಣೆಯಂತಿರುವ ಮೇರಿ ಕ್ಯೂರಿಗೇ ಪ್ರತಿಷ್ಠಿತ ವೈಜ್ಞಾನಿಕ ಸಂಸ್ಥೆಗಳು ಬಾಗಿಲು ಮುಚ್ಚಿದರೆ, ಮಹಿಳೆ ಮತ್ತು ವಿಜ್ಞಾನವನ್ನು ಕುರಿತು ನಮ್ಮ ಸಮಾಜದ ಅವೈಜ್ಞಾನಿಕ ಮನೋಭಾವ ಎಷ್ಟಿದೆ ಎಂಬುದನ್ನು ಊಹಿಸಬಹುದು.

ವಿಜ್ಞಾನ ಹೆಂಗಸರ ರಂಗವಲ್ಲ ಎಂಬ ಪೂರ್ವಾಗ್ರಹ ಆಕೆಯನ್ನು ವಿಜ್ಞಾದ ಕಲಿಕೆಯಿಂದ ದೂರವಿಟ್ಟಿತು. ಇತಿಹಾಸದುದ್ದಕ್ಕೂ ಮಹಿಳೆಯನ್ನು ವಿಜ್ಞಾನದ ಹೊರಗಿಡುವ ಪ್ರಯತ್ನ ನಡೆದದ್ದು ಸುಳ್ಳಲ್ಲ. ಒಮ್ಮೆ ಆಕೆಯ ಬುದ್ಧಿಮತ್ತೆಯ ಸಂಶಯಿಸಿದರೆ ಮತ್ತೊಮ್ಮೆ ಗಣಿತ, ವಿಜ್ಞಾನ ಮಹಿಳೆಯರ ಆರೋಗ್ಯಕ್ಕೆ ಮಾರಕ ಎಂಬ ಕುರುಡು ನಂಬಿಕೆಯ ಬಿತ್ತಿದರು. ಹಾಗೆಂದೇ ಚರಿತ್ರೆಯುದ್ದಕ್ಕೂ ಮಹಿಳಾ ವಿಜ್ಞಾನಿಗಳಲ್ಲಿ ಬಹುಮಂದಿ ಸ್ವಂತ ಕಲಿಕೆಯಿಂದ ಗಣಿತ ವಿಜ್ಞಾನವನ್ನು ಅಧ್ಯಯಿಸಬೇಕಾಯಿತು. ಸಹೃದಯ ಪುರುಷ ವಿಜ್ಞಾನಿಗಳ ಸಾಂಗತ್ಯದಲ್ಲಿ, ಸ್ನೇಹ-ಸಂಬಂಧದಲ್ಲಿ, ಪತ್ರಮಿತ್ರತ್ವದಲ್ಲಿ ತಮ್ಮ ಜ್ಞಾನವನ್ನು ಹಿಗ್ಗಿಸಿಕೊಂಡ ಮಹಿಳೆಯರು ಬಹಳ ಮಂದಿ ಇದ್ದಾರೆ. ಬಹಳಷ್ಟು ಮಹಿಳೆಯರು ಪುರುಷ ವಿಜ್ಞಾನಿಗಳಿಗೆ ಸಹಾಯಕರಾಗಿ ಆರಂಭಿಸಿ ತಮ್ಮ ವಿಜ್ಞಾನದ ಆಸಕ್ತಿಯ ವಿಕಾಸವನ್ನು ಕಂಡುಕೊಂಡಿದ್ದಾರೆ. ಅವರ ಬದುಕಿನಲ್ಲಿ ಹಾದ ಪುರುಷರು, ಅವರ ವೈಜ್ಞಾನಿಕ ಆಸಕ್ತಿಯ ಮೇಲೆ ತೀವ್ರವಾಗಿ ಪ್ರಭಾವ ಬೀರಿದರು. ಮೇರಿ ಲವೋಸಿಯರ್‌ಳ ಬದುಕು ಇದಕ್ಕೆ ಉತ್ತಮ ಉದಾಹರಣೆ,

ಎ. ಎಲ್. ಲವೋಸಿಯರ್ ಆಧುನಿಕ ರಸಾಯನ ಶಾಸ್ತ್ರದ ಪಿತಾಮಹ, 1771 ರಲ್ಲಿ, ಇಪ್ಪತ್ತೆಂಟು ವರ್ಷದ ಲವೋಸಿಯರ್ ಮೇರಿಯನ್ನು ವಿವಾಹವಾದಾಗ ಆಕೆಗೆ 14 ವರ್ಷ ! ಸ್ವತಂತ್ರವಾಗಿ ವಿಜ್ಞಾನವನ್ನು ಆಯ್ದುಕೊಳ್ಳುವ ಅವಕಾಶವಿಲ್ಲದ ಆ ಕಾಲದಲ್ಲಿ, ಮೇರಿ

ಲವೋಸಿಯರ್ ಪತಿಯ ಪ್ರಯೋಗ ಶಾಲೆಯಲ್ಲಿ ಸಹಾಯಕಿಯಾಗಿ ನಿಂತಳು. ಪತಿಯ ಪ್ರೀತಿ, ಪ್ರೋತ್ಸಾಹದಲ್ಲಿ ಆಕೆಯ ವಿದ್ಯಾಭ್ಯಾಸ ಮುಂದುವರೆದು, ಹಲವು ಭಾಷೆಗಳ ಕಲಿತ ಈಕೆ, ಪತಿಗೆ ಉಪಯುಕ್ತ ವೈಜ್ಞಾನಿಕ ಮಾಹಿತಿಗಳ ಪುಸ್ತಕಗಳ ಭಾಷಾಂತರಿಸಿಕೊಟ್ಟಳು. ಆಕೆಯ ರಸಾಯನಶಾಸ್ತ್ರದ ಅರಿವು, ಜ್ಞಾನ ಆಕೆ ಭಾಷಾಂತರಿಸಿದ ಪುಸ್ತಕಗಳಿಗೆ ಮೇರಿ, ಸೇರಿಸಿದ ಟಿಪ್ಪಣಿಗಳಲ್ಲಿ ಕಾಣಬಹುದು. ಲವೋಸಿಯರ್ ಪತ್ನಿಯ ಮೇಧಾವಿತನವನ್ನು, ಪ್ರತಿಭೆಯನ್ನು ಮೆಚ್ಚಿದವನು ಗೌರವಿಸಿದವನು. ಚಿತ್ರಕಲೆಯ ವಿಶೇಷವಾಗಿ ಅಭ್ಯಾಸ ಮಾಡಿದ ಮೇರಿ, ಅಂದಿನ ಪ್ರಯೋಗಗಳ ಉಪಕರಣಗಳ ಸೂಕ್ಷ್ಮ ವಿವರಗಳೊಡನೆ ದಾಖಲಿಸಿದಳು. ಮೇರಿ ಉತ್ತಮ ಆತಿಥೇಯಳೂ ಕೂಡಾ. ವಿಜ್ಞಾನಿಗಳಿಗೆ, ಮೇಧಾವಿಗಳಿಗೆ ಅವಳ ಔತಣ ಕೂಟಗಳು ಚರ್ಚೆ-ವಿಷಯ ವಿನಿಮಯದ ಸೂಕ್ತ ಸ್ಥಳವಾಗಿಸಿತ್ತು. ಪತಿಯ ನೆರವಿನಿಂದ, ಮೇರಿಗೆ ಅಂದಿನ ಪ್ರತಿಕೂಲ ಪರಿಸರದಲ್ಲೂ ವೈಜ್ಞಾನಿಕ ಆಸಕ್ತಿಯ ಮುಂದುವರೆಸಲು ಸಾಧ್ಯವಾಯಿತು ಹಾಗೂ ಪತಿಯ ಸಂಶೋಧನೆಗಳಲ್ಲಿ ತನ್ನ ಮಿತಿಯಲ್ಲೇ ಸಂಗಾತಿಯಾದಳು. ಆದರೆ ಆಕೆಯ ಸಹಸ್ಪಂದನ ಈ ಸಂಖೀ ಜೀವನ ತಟ್ಟನೆ ದುರಂತದಲ್ಲಿ ಕೊನೆಗೊಂಡಿತು. ಫ್ರೆಂಚ್ ಕ್ರಾಂತಿಯ ಸಂದರ್ಭ 1794ರಲ್ಲಿ ಮೇರಿಯ ಪತಿ ಮತ್ತು ಮಾವನನ್ನು ತಂಬಾಕಿನ ಬೆರಕೆಯ ಅಪವಾದದ ಮೇಲೆ ಹಿಡಿದು, ತಲೆ ಕಡಿದರು. ಈ ಭಯಂಕರ ದುರ್ಘಟನೆ ಮೇರಿಯನ್ನು ಅಧೀರಳಾಗಿಸಲಿಲ್ಲ. ತನ್ನ ಗಂಡನ ಮೇಲಿನ ಅಪವಾದಗಳ ಸುಳ್ಳೆಂದು ಸಾಬೀತು ಪಡಿಸಿ, ಆತನ ವಿರೋಧಿಗಳ ನೆಲಕಚ್ಚಿಸಿದ ಈಕೆ, 1796ರಲ್ಲಿ ಪತಿಯ ಪ್ರಯೋಗದ ಉಪಕರಣಗಳ, ವೈಜ್ಞಾನಿಕ ಬರಹಗಳ, ಪುಸ್ತಕಗಳನ್ನು ಹೋರಾಡಿ ಪಡೆದಳು. ಮತ್ತೆ ತನ್ನ ಔತಣ ಕೂಟಗಳ ಏರ್ಪಡಿಸಿ, ಮೇಧಾವಿ ವಿಜ್ಞಾನಿಗಳೊಡನೆ ಚರ್ಚೆಯಲ್ಲಿ ಭಾಗವಹಿಸಿದಳು. ಆಕೆಗೆ ಮರು ಮದುವೆಯ ಅವಕಾಶಗಳೂ ಬಹಳವಿತ್ತು. ಮೇರಿ ತನ್ನ ರಸಾಯನ ಶಾಸ್ತ್ರದ ಆಸಕ್ತಿಗೆ ಪೂರಕವಾಗಲು, ಮೊದಲ ಪತಿಯಂತೆಯೇ ಸಾಂಗತ್ಯ ನೀಡಬಹುದೆಂಬ ವಿಶ್ವಾಸದಲ್ಲಿ, ಪ್ರಾಯೋಗಿಕ ವಿಜ್ಞಾನಿ ಬೆಂಜಮೀನ್ ಥಾಂಪ್ಸನ್‌ನ ವಿವಾಹವಾದಳು. ಬೆಂಜಮೀನ್ ಥಾಂಪ್ಸನ್ 'ರಾಯಲ್ ಇನ್‌ಸ್ಟಿಟ್ಯೂಟ್'ನ ಸ್ಥಾಪಕ ಸದಸ್ಯ. ಆದರೆ ವಿವಾಹ ಮೇರಿಯ ನಿರೀಕ್ಷೆಯಂತೆ ಆಕೆಯ ವಿಜ್ಞಾನದ ಆಸಕ್ತಿಗೆ ನೆರವಾಗಲಿಲ್ಲ. ಪ್ರೀತಿಯ ಸಾಂಗತ್ಯವಾಗಲಿಲ್ಲ. ಬೆಂಜಮೀನ್‌ಗೆ ಪತ್ನಿ ತನ್ನ ವೈಜ್ಞಾನಿಕ ಸಂಶೋಧನೆಗಳಲ್ಲಿ ಭಾಗಿಯಾಗುವುದು ಅಸಹನೀಯವಿತ್ತು. ಆತನ ಬಹಳಷ್ಟು ಶೋಧನೆಗಳು ಪ್ರಯೋಗಗಳು, ಗೃಹ ಉಪಕರಣಗಳ ಸುಧಾರಣೆಯಾಗಿದ್ದರೂ, ಪತ್ನಿಗೆ ಅವುಗಳಲ್ಲಿ ಪಾಲ್ಗೊಳ್ಳಲು ಬಿಡುತ್ತಿರಲಿಲ್ಲ. ಆಕೆಯ ವಿಜ್ಞಾನಿಗಳೊಡನೆ ಚರ್ಚೆ-ಮಾತುಕತೆ ಬೆಂಜಮೀನ್‌ಗೆ ಹಿಡಿಸುತ್ತಿರಲಿಲ್ಲ. ಎಷ್ಟೋ ಬಾರಿ ಆಕೆ ವಿಜ್ಞಾನಿಗಳೊಡನೆ ಭೇಟಿಯಾಗಬಾರದೆಂದು ಅವಳನ್ನು ಒಳಗೆ ಕೂಡಿ ಬೀಗ ಜಡಿಯುತ್ತಿದ್ದ. ಸ್ವಲ್ಪವೂ ವಿಚಲಿತವಾಗದ ಮೇರಿ ಒಳಗಿನಿಂದಲೇ, ಹೊರಗೆ ನಿಂತ ಅತಿಥಿಗಳೊಡನೆ ತನ್ನ ಸಂಭಾಷಣೆ ಮುಂದುವರೆಸುತ್ತಿದ್ದಳು. ಮೇರಿಗೆ ಈ ವಿವಾಹ ಉಸಿರುಕಟ್ಟಿಸಿರಬೇಕು, ಬಹಳ ಬೇಗನೆ ಅವರಿಬ್ಬರೂ ಬೇರ್ಪಟ್ಟರು.

## ವಿಜ್ಞಾನಕ್ಕಾಗಿ 'ಗಂಡಾ'ದವರು

ಅನೇಕ ಮಹಿಳೆಯರು ಸುತ್ತಲ ಸಮಾಜದ ಲಿಂಗಭೇದದ ರೀತಿನೀತಿಯಿಂದಾಗಿ ಪುರುಷರ ಹೆಸರಿಟ್ಟು ಕೊಂಡು ದುಡಿದದ್ದೂ, ಬರೆದದ್ದೂ ಇದೆ. ಸೋಫಿಯಾ ಜರ್ಮನ್ ಪ್ರಸಿದ್ಧ ಗಣಿತಜ್ಞ ಫ್ರೆಡರಿಗ್ ಗಾಸ್‌ನೊಡನೆ ಗಂಡು ಹೆಸರಲ್ಲಿ ಪತ್ರ ವ್ಯವಹಾರ ಪ್ರಾರಂಭಿಸಿದ್ದಳು. ಸೋಫಿಯಾ ಜರ್ಮನ್ ತನ್ನ ವೈಜ್ಞಾನಿಕ ಪ್ರಬಂಧವನ್ನು ಗಂಡು ಹೆಸರಲ್ಲಿ ಬರೆದು ಒಪ್ಪಿಸಿದಳು. ಎಮಿಲೀ ಡು ಚಾಟಲೇ ಪುರುಷ ವಿಜ್ಞಾನಿಗಳಷ್ಟೇ ಪ್ರವೇಶವಿದ್ದ ಕೆಫೆಗೆ

ಅವರೊಡನೆ ಚರ್ಚಿಸುವ ಅವಕಾಶಕ್ಕಾಗಿ ಗಂಡು ವೇಷ ಧರಿಸಿ ಹೋಗುತ್ತಿದ್ದಳು. 1795 ರಲ್ಲಿ ಹುಟ್ಟಿದ ಡಾ॥ ಜೇಮ್ಸ್ ಬ್ಯಾರಿ ತನ್ನ ಇಡೀ ಬದುಕಿನುದ್ದಕ್ಕೂ ತನ್ನ ನಿಜವಾದ ಲಿಂಗವನ್ನು ಮುಚ್ಚಿಟ್ಟು ಪುರುಷನಂತೆ ವೇಷ ತೊಟ್ಟು ಬ್ರಿಟನ್ನಿನ ಭೂಸೇನೆಗೆ ಸೇರಿ ಸುದೀರ್ಘ ಕಾಲ ದಕ್ಷ ವೈದ್ಯಳಾಗಿ ದುಡಿದಳು. ಆಕೆ ಸತ್ತ ಮೇಲೆ ಆಕೆಯ ದೇಹವನ್ನು ಪರೀಕ್ಷಿಸಿದಾಗಲೇ ಡಾ॥ ಜೇಮ್ಸ್ ಹೆಣ್ಣೆಂಬ ಸತ್ಯ ಹೊರಬಿದ್ದದ್ದು. ಬಹುಶಃ ಹೆಂಗಸರು ವಿಜ್ಞಾನವನ್ನು ಅಧ್ಯಯಿಸಲು, ತಮ್ಮ ಆಸಕ್ತಿಯ ಉದ್ಯೋಗವನ್ನು ಹಿಡಿಯಲು ಈ ಮಟ್ಟಕ್ಕೂ ಹೋಗ ಬೇಕಿತ್ತು. ಇಂಥಾ ಸ್ಥಿತಿ ಹೇಗೆ ಹುಟ್ಟಿಕೊಂಡಿತೆಂಬುದೇ ಕುತೂಹಲಕಾರಿ. ಹೆಂಗಸರಿಗೆ ಪ್ರಾಚೀನ ಕಾಲದಲ್ಲಿ ಗಣಿತ, ತತ್ವಶಾಸ್ತ್ರಗಳ ಓದುವ ಅವಕಾಶವಿತ್ತು. ಪೈಥಾಗೊರಸನ ಬಳಿ ಅನೇಕ ವಿದ್ಯಾರ್ಥಿನಿಯರಿದ್ದರು.

---

**ಕ್ರಿಸ್ತಶಕ ಒಂದನೇ ಶತಮಾನದಲ್ಲಿ, ಅಲೆಕ್ಸಾಂಡ್ರಿಯಾ ನಗರದಲ್ಲಿ, ಈಜಿಪ್ತಿನಲ್ಲಿ ಅನೇಕ ಮಹಿಳಾ ತತ್ವಶಾಸ್ತ್ರಜ್ಞರಿದ್ದರು, ಗಣಿತಜ್ಞರಿದ್ದರು ಆಲ್ಕಮಿ ರಸತಂತ್ರಜ್ಞರಿದ್ದರು. ಆದರೆ ಮೆಲ್ಲನೆ ಮಹಿಳೆಯರನ್ನು ಕುರಿತಂತೆ, ಅವರ ಬುದ್ಧಿಮತ್ತೆ ಯನ್ನು ಕುರಿತಂತೆ ವಿಚಿತ್ರ ವಾದಗಳು ಹುಟ್ಟಿ ಕೊಂಡು ಆಕೆಯನ್ನು ವಿಜ್ಞಾನ ರಂಗದಿಂದ ಹೊರಗಿಡಲಾಯಿತು. ಮಹಿಳೆಯರನ್ನು ಕುರಿತು ಸಾಮಾನ್ಯರ ಕುರುಡು ನಂಬಿಕೆಗಳಿರಲಿ, ವಿಜ್ಞಾನಿ ಗಳೆನಿಸಿಕೊಂಡವರ ಪೂರ್ವಾಗ್ರಹ ಎಷ್ಟಿತ್ತೆಂದು ನೋಡಿದರೆ ಆಶ್ಚರ್ಯವಾಗುತ್ತದೆ.**

---

## ಪುರುಷ ವಿಜ್ಞಾನಿಗಳ ಪೂರ್ವಾಗ್ರಹ

ವಿಜ್ಞಾನಿಗಳೆಂದರೆ ಅಪ್ಪಟ ವಾಸ್ತವವಾದಿಗಳು, ಪೂರ್ವಾಗ್ರಹವಿಲ್ಲದವರು, ಸತ್ಯದ ಅನ್ವೇಷಕರು ಎಂಬೆಲ್ಲ ಮಹತ್ತರದ ಕಲ್ಪನೆಗಳಿವೆ. ಆದರೆ ಮಹಿಳೆಯ ವಿಷಯ ಬಂದಾಗ ದೊಡ್ಡ ದೊಡ್ಡ ವಿಜ್ಞಾನಿಗಳೂ ಅತ್ಯಂತ ಅವೈಜ್ಞಾನಿಕ ರೀತಿಯಲ್ಲಿ ತಮ್ಮ ಸ್ತ್ರೀ ವಿರೋಧಿ ನಂಬಿಕೆ ಗಳಿಗೆ, ಪ್ರತಿಗಾಮಿ ಚಿಂತನೆಗಳಿಗೆ ತೆತ್ತುಕೊಂಡಿರುವುದನ್ನು ಕಾಣಬಹುದು.

ಎರಡು ಸಾವಿರ ವರ್ಷಗಳ ಹಿಂದಿನ ಮಹಾನ್ ತತ್ವಜ್ಞಾನಿ ಅರಿಸ್ಟಾಟಲ್ ಪೂರ್ಣ ತರ್ಕದಿಂದಲೇ "ಹೆಂಗಸರಿಗೆ, ಗಂಡಸರಿಗಿಂತ ಕಡಮೆ ಹಲ್ಲುಗಳಿವೆ' ಎಂದು ಸಾಧಿಸಿದ. ಆದರೆ ಆತನೆಂದೂ ತನ್ನ ಹೆಂಡತಿಯದೇ (?) ಬಾಯಿ ತೆರೆಸಿ ಎಣಿಸಿ ನೋಡುವ ತಂಟೆಗೆ ಹೋಗಲಿಲ್ಲ. ಜೊತೆಗೆ, 'ಗಂಡಸರು ಕ್ರಿಯಾಶೀಲರು, ಹೆಂಗಸರ ನಿಷ್ಕ್ರಿಯರು' ಎಂದೂ ತಿಳಿದಿದ್ದ. ಪುರುಷ ಪರಿಪೂರ್ಣ ಮಾನವ. ಹೆಂಗಸು ಊನಗೊಂಡ ಪುರುಷನ ರೂಪ ಮಾತ್ರ, ಎಂದೂ ವಾದಿಸಿದ್ದ. ಡಾರ್ವಿನ್, ಫ್ರಾಯಿಡ್ ನಂಥಾ ದೊಡ್ಡ ವಿಜ್ಞಾನಿಗಳೂ ಕೂಡಾ, ಹೆಂಗಸು ಗಂಡಸಿ ಗಿಂತ ಜನ್ಮತಃ ಕೀಳೆಂದು, ಅಸಮರ್ಥಳೆಂದು ನಂಬಿದ್ದರು.

ಹತ್ತೊಂಬತ್ತನೇ ಶತಮಾನದಲ್ಲಿ ಬಹಳಷ್ಟು ವಿಜ್ಞಾನಿಗಳು ಗಂಡು ಹೆಣ್ಣಿನ ಮಿದುಳಿನ ರಚನೆಯಲ್ಲಿಯ ವ್ಯತ್ಯಾಸಗಳ ಗುರುತಿಸಿ, ಆ ಮೂಲಕ ವಿಕಾಸದ ದಾರಿ ಯಲ್ಲಿ ಹೆಣ್ಣು ಗಂಡುಗಳಿಗಿಂತ ಬಹಳ ಹಿಂದೆ ಉಳಿದಿದ್ದಾ ಳೆಂದು ಸಮರ್ಥಿಸಲು ಬಳಸಿದರು. ಆಕೆಯ ಮಿದುಳಿನ ರಚನೆಯ ವ್ಯತ್ಯಾಸಗಳಿಂದ ಆಕೆ ಕಡಿಮೆ ಬುದ್ಧಿವಂತ ಳೆಂದು ನಿರ್ಣಯಿಸಿಬಿಟ್ಟರು.

1861ರಲ್ಲಿ ಪ್ರಸಿದ್ಧ ಫ್ರೆಂಚ್ ಮಾನವಶಾಸ್ತ್ರಜ್ಞ ಪಾಲ್ ಬ್ರೋಕಾ, ಸತ್ತ ಗಂಡಸರ ಹಾಗೂ ಹೆಂಗಸರ ಮಿದುಳುಗಳನ್ನು ತೂಕ ಮಾಡಿ, ಹೆಂಗಸರ ಮಿದುಳು ಸರಾಸರಿ 200 ಗ್ರಾಂಗಳಷ್ಟು, ಗಂಡಸರ ಮಿದುಳಿಗಿಂತ ಕಡಿಮೆ ತೂಗುತ್ತದೆಂದು ಹೇಳಿದ. ಆತನ ವಿದ್ಯಾರ್ಥಿ ಯೊಬ್ಬ ಗುರುವನ್ನೂ ಮೀರಿಸಿ 'ಹೆಂಗಸರ ಮಿದುಳಿನ

ಆಳತೆ ಗೋರಿಲ್ಲಾ ಮೆದುಳಿಗೆ ಹತ್ತಿರವಾಗಿದೆ' ಎಂದು ಸಾರಿದ. ಆತ 'ಹೆಂಗಸರ ಮಿದುಳನ್ನು ಅಧ್ಯಯಿಸಿದ ಮನಶಾಸ್ತ್ರಜ್ಞರೆಲ್ಲರೂ, ಆಕೆಯು ಕೀಳು ವಿಕಾಸವನ್ನು ಗುರುತಿಸಿದ್ದಾರೆಂದೂ, ಹೆಣ್ಣಿನ ಬುದ್ಧಿಮಟ್ಟ ಒಂದು ಮಗುವಿನ ಬುದ್ಧಿಮಟ್ಟಕ್ಕೆ ಸಮನೆಂದೂ ಸಾಧಿಸಿದ.

ಹತ್ತೊಂಬತ್ತನೇ ಶತಮಾನದ ವಿಜ್ಞಾನಿಗಳು 'ಬುದ್ಧಿವಂತಿಕೆ' ಮೆದುಳಿನ ಮುಂಭಾಗದಲ್ಲಿರುವುದಾಗಿ (Frontal lobe) ಸಂಪೂರ್ಣ ನಂಬಿದ್ದರು. ಹಾಗೆಂದೇ ಯಾವ ಸಾಕ್ಷಾಧಾರಗಳೂ ಇಲ್ಲದೆಯೇ 'ಹೆಂಗಸರ ಮೆದುಳಿನ ಮುಂಭಾಗ ಚಿಕ್ಕದಾಗಿರುವುದೆಂದೂ ಸಂಬಿದರು. 1884 ರಲ್ಲಿ ಪ್ರಕಟವಾದ ವೈಜ್ಞಾನಿಕ ಪುಸ್ತಕದಲ್ಲಿ 'ಹೆಂಗಸರನ್ನು 'Home Parietails' ಎಂದೂ, ಗಂಡಸರನ್ನು 'Homo Frontatis' ಎಂದೂ ಕರೆಯಲಾಗಿತ್ತು. ಅಂದರೆ ಗಂಡಸರ ಮಿದುಳಿನ ಮುಂಭಾಗ ಅತಿ ದೊಡ್ಡದಾಗಿ, ಪ್ರಮುಖವಾಗಿದ್ದು, ಗಂಡಸರು ಬಹು ಬುದ್ಧಿಶಾಲಿಗಳೆಂದು ಬೆನ್ನು ತಟ್ಟಿಕೊಂಡ ಬುದ್ಧಿವಂತರು ಇವರು. ಆದರೆ ಅವರ ದುರಾದೃಷ್ಟಕ್ಕೆ ಹೆಣ್ಣಿನ ಬುರುಡೆಯು ಬಿಚ್ಚಿ ಮಿದುಳನ್ನು ಬಿಡಿಸಿ ನೋಡಿದಾಗ, ಇಂಥಾ ವಿಜ್ಞಾನಿಗಳು ಬಯಸಿದ ಚಿಕ್ಕ Frontal lobe ಅಲ್ಲಿರದಿದ್ದದ್ದು ನಿರಾಶೆ ತರಿಸಿರಬೇಕು. ಹೆಂಗಸರ ಮಿದುಳಿನ ಮುಂಭಾಗ, ಗಂಡಸರಿಗಿಂತ ದೊಡ್ಡದಿರುವುದು ಅರಿವಾದೊಡನೆ ತಟ್ಟನೆ ಗಂಡು ವಿಜ್ಞಾನಿಗಳು, 'ಹಾಗಾದರೆ ಮಿದುಳಿನ ಮುಂಭಾಗದಲ್ಲಿ ಬುದ್ಧಿವಂತಿಕೆ ಇಲ್ಲ, ಅದಿರುವುದು Parietal lobe ನಲ್ಲಿ' ಎಂದು ತೀರ್ಮಾನಿಸಿಬಿಟ್ಟರು. ವಾಸ್ತವ ಸತ್ಯ, ನಿಜ ಸಂಗತಿ ತಮ್ಮ ನಂಬಿಕೆಗಳಿಗೆ ವಿಪರೀತವಿದ್ದಾಗ, ನಿಜವಾದ ವಿಜ್ಞಾನಿಗಳಂತೆ ಸತ್ಯ ಶೋಧನೆಗೆ ಮುಕ್ತ ಮನಸ್ಸಿನಿಂದ ಮುನ್ನುಗ್ಗಿ, ತಮ್ಮ ಪೂರ್ವಾಗ್ರಹಗಳ ತಿದ್ದಿಕೊಳ್ಳುವ ಬದಲು, ತಮ್ಮ ಕುರುಡು ನಂಬಿಕೆಗಳಿಗೆ ಸಮರ್ಥನೆಗಳ ಕಂಡುಕೊಂಡು ತೃಪ್ತರಾದರು.

---

**ಇಪ್ಪತ್ತನೇ ಶತಮಾನದ ಆದಿಯಲ್ಲೇ ಮಿದುಳಿನ ಅಳತೆಗೂ, ಬುದ್ಧಿವಂತಿಕೆಗೂ ಯಾವ ಸಂಬಂಧ ವಿಲ್ಲವೆಂದು ಧೃಡವಾಯಿತು. ಹತ್ತೊಂಬತ್ತನೇ ಶತಮಾನದ ಸಿದ್ಧಾಂತಗಳ ಶುದ್ಧ 'ಬುರುಡೆ' ಎಂದು ಅತ್ತ ಒಗೆಯಲಾಯಿತು. ನಿಜ, ಹೆಂಗಸರ ಮಿದುಳು ಗಂಡಸರಿಗಿಂತ ಚಿಕ್ಕದಿದೆ, ಆದರೆ ಅವರ ಬುದ್ಧಿವಂತಿಕೆ ಸಣ್ಣದಿಲ್ಲ.**

---

ಹತ್ತೊಬಂತ್ತನೇ ಶತಮಾನದ ಕೊನೆಯಲ್ಲಿ ಮತ್ತೊಂದು ವಿಚಿತ್ರ ವಾದ ಜನ್ಮ ತಳೆಯಿತು. ಹೆಚ್ಚು ಓದಿದ ಹೆಣ್ಣು ಬಂಜೆಯಾಗುತ್ತಾಳೆಂಬ ನಂಬಿಕೆಯು ಬಿತ್ತ ತೊಡಗಿದರು. ಸಾಲದಕ್ಕೆ ಇಂಥಾ ಅವೈಜ್ಞಾನಿಕ ನಂಬಿಕೆಗಳ, ವಿಜ್ಞಾನದ ಹೆಸರಲ್ಲಿ ಪ್ರಚಾರ ಪಡೆಸಿದ್ದೂ ಆಯಿತು. 'ಮಹಿಳೆಯ ಉನ್ನತ ವ್ಯಾಸಂಗ ಆಕೆಯ ಸಂತಾನೋತ್ಪತ್ತಿಗೆ ಮಾರಕ' ಎಂದು ಸಾಧಿಸಿತು ಡಾ॥ ಇ.ಎಚ್. ಕ್ಲಾರ್‌ನ ವೈಜ್ಞಾನಿಕವೆಂದು ಹೇಳಿಕೊಂಡ ಪುಸ್ತಕ ? ಇಂದು ಎಷ್ಟೇ ಓದಿದರೂ ಮಕ್ಕಳಾಗುವುದು ತಪ್ಪುವುದಿಲ್ಲ ಎಂಬುದು ಸರ್ವರಿಗೂ ತಿಳಿದ ಸಂಗತಿ.

ಆಧುನಿಕ ಭೌತಶಾಸ್ತ್ರಕ್ಕೆ ಜನ್ಮ ಕೊಟ್ಟು 'ಕ್ವಾಂಟಮ್ ಥಿಯರಿ'ಯ ಮುಂದಿಟ್ಟ, ಮ್ಯಾಕ್ಸ್ ಪ್ಲಾಂಕ್ 'ಹೆಂಗಸರು ಹೆಂಡತಿ ಮತ್ತು ತಾಯಿಯಾಗಲೆಂಬುದೇ ಪ್ರಕೃತಿ ನಿಯಮ' ಎಂದು ನಂಬಿದ್ದ, ಅದೃಷ್ಟವಶಾತ್ ತನ್ನ ನಂಬಿಕೆಗೆ ವಿರೋಧವೆನಿಸಿದರೂ, ಬರ್ಲಿನ್‌ನ್ನಿನಲ್ಲಿ ತಾನು ನೀಡಿವ ಭೌತಶಾಸ್ತ್ರದ ಪ್ರವಚನಗಳನ್ನು ಬಂದು ಆಲಿಸಲು ಲೀ ಮೇಟ್ನರ್ ಎಂಬ ಆಸ್ಟ್ರಿಯಾದ ಮಹಿಳೆಗೆ ಅನುಮತಿ ನೀಡಿದ, ಈಕೆ ಪ್ರೊಟಾಕ್ಟಿನಿಯಮ್ ಎಂಬ ಮೂಲ ಧಾತುವನ್ನು ಕಂಡು ಹಿಡಿದದ್ದಲ್ಲದೆ, ಪರಮಾಣು ವಿಭಜನೆಯ ಕಂಡುಹಿಡಿದ ಮೊಟ್ಟ ಮೊದಲ ವಿಜ್ಞಾನಿಯಾದಳು.

## ‘ಗಂಡು ರಂಗ’ಕ್ಕೆ ಲಗ್ಗೆ ಇಟ್ಟವರು

ಹದಿನೇಳನೇ ಶತಮಾನದಲ್ಲಿ, ಬ್ರಿಟಿಷ್ ವಿಜ್ಞಾನದ ಕೇಂದ್ರವಾದ ‘ರಾಯಲ್’ಸೊಸೈಟಿಯ ಮೊಟ್ಟ ಮೊದಲ ಕಾರ್ಯದರ್ಶಿ ಹೆನ್ರಿ ಓಲ್ಡ್‌ನ್‌ಬರ್ಗ ವಿಜ್ಞಾನವನ್ನು ‘ಗಂಡು ತತ್ತ್ವಜ್ಞಾನ’ ವೆಂದು ಕರೆದರೆ, ಆತನ ಸಮಕಾಲಿನ ಬಿಷಪ್ ಥಾಮಸ್ ಸ್ಪ್ರಾಟ್, ವಿಜ್ಞಾನವನ್ನು ‘ಬಹುಕಾಲ ಉಳಿವ ಗಂಡು ಜ್ಞಾನ’ವೆಂದು ಘೋಷಿಸಿದ. ವಿಜ್ಞಾನ ರಂಗ ರೂಪಗೊಂಡು ಮೇಲೇರುತ್ತಿದ್ದ ಈ ಐತಿಹಾಸಿಕ ಕ್ಷಣಗಳಲ್ಲಿ ಇಂಥಹ ಘೋಷಣೆಗಳು, ಹೆಂಗಸರನ್ನು ವಿಜ್ಞಾನದಿಂದ ಹೊರಗಿಡಲು, ಹೆಂಗಸರಲ್ಲಿ ವಿಜ್ಞಾನ ತಮ್ಮ ಸಾಮಾರ್ಥ್ಯಕ್ಕೆ ಮೀರಿದ ರಂಗವೆಂಬ ಕೀಳರಿಮೆ ತುಂಬಲು ಸಂಪೂರ್ಣ ಸಮರ್ಥವಾಯಿತು. ‘ರಾಯಲ್ ಸೊಸೈಟಿ’ಗೆ ಮಹಿಳೆಯರಿಗೆ ಪ್ರವೇಶವಿರಲಿಲ್ಲ. ನ್ಯೂ ಕ್ಯಾಸೆಲ್‌ನ ಡಚೆಸ್ ಆಗಿದ್ದ ಮಾರ್ಗರೇಟ್ ಕ್ಯಾವೆಂಡಿಷ್ ವಿಜ್ಞಾನದಲ್ಲಿ ತೀವ್ರ ಆಸಕ್ತಿ ಉಳ್ಳ ಮಹಿಳೆ. ಅವಳ ಈ ಆಸಕ್ತಿಯ ಪರಿಣಾಮವಾಗಿ ಜನ ಆಕೆಯನ್ನು ‘ಹುಚ್ಚು ಮಾಡ್ಗೆ’ ಎಂದು ಕರೆದರೂ ಲೆಕ್ಕಿಸದೆ ಆಕೆ ‘ರಾಯಲ್ ಸೊಸೈಟಿ’ಯ ಈ ಪಕ್ಷಪಾತದ ರೀತಿಯ ವಿರೋಧಿಸಿದಳು. ಆಧುನಿಕ ವಿಜ್ಞಾನವನ್ನು ಕುರಿತು ಯಥೇಚ್ಛವಾಗಿ ಬರೆದ ಈಕೆ ‘ರಾಯಲ್ ಸೊಸೈಟಿ’ಯ ಸದಸ್ಯಳಾಗುವ ಧೃಢ ನಿರ್ಧಾರದಲ್ಲಿ ಸಾರ್ವಜನಿಕವಾಗಿ ಚಳುವಳಿ ನಡೆಸಿದ್ದು ಲಂಡನ್ನಿನಲ್ಲಿ ಭಾರೀ ಸುದ್ಧಿಯಾಯಿತು. ಬಹಳಷ್ಟು ಘಟಾನುಘಟಿಗಳ ತೀವ್ರ ವಿರೋಧದಲ್ಲಿಯೂ ಈಕೆ 1667 ರಲ್ಲಿ 'ರಾಯಲ್ ಸೊಸೈಟಿ'ಯ ಸದಸ್ಯೆಯಾದದ್ದೇನೋ ನಿಜ, ಆದರೆ ಅದಕ್ಕೆ ಆಕೆ ಡಚೆಸ್ ಆದದ್ದೂ ಕಾರಣವಿರಬಹುದು. ಆಕೆಯ ನಂತರ ‘ರಾಯಲ್ ಸೊಸೈಟಿ’ ಮತ್ತೆ ಮಹಿಳೆಯರಿಗೆ ಪ್ರವೇಶ ನೀಡಿದ್ದು 1945ರಲ್ಲಿ 278 ವರ್ಷಗಳ ನಂತರ !

ಇತರ ವಿಶ್ವವಿದ್ಯಾಲಯಗಳೂ, ವಿಜ್ಞಾನದ ಸಂಸ್ಥೆಗಳೂ ಇಂಥಾ ಸ್ತ್ರೀ ವಿರೋಧಿ ಧೋರಣೆಗೆ ಹೊರತಾಗಿರಲಿಲ್ಲ. ಪ್ಯಾರೀಸಿನ ‘ಈಕೋಲೆ ಪಾಲಿಟೆಕ್ನಿಕ್ ಮಹಾವಿದ್ಯಾಲಯ’ ಪ್ರಾರಂಭವಾದದ್ದು 1794ರಲ್ಲಿ. ಆದರೆ ಮಹಿಳೆಯರಿಗೆ ಅಲ್ಲಿ ಪ್ರವೇಶ ಸಿಗಲು 178 ವರ್ಷಗಳು ಕಾಯಬೇಕಾಯ್ತು. 1972ರ ವರೆಗೆ ಇಲ್ಲಿ ಮಹಿಳೆಯರಿಗೆ ಪ್ರವೇಶವಿರಲಿಲ್ಲ. ಹತ್ತೊಂಭತ್ತನೇ ಶತಮಾನದ ಬಹುಮುಖ್ಯ ವಿಜ್ಞಾನ ಕೇಂದ್ರಗಳಾದ ಜರ್ಮನಿಯ ವಿಶ್ವವಿದ್ಯಾಲಯಗಳಲ್ಲಿ ಮಹಿಳೆಯರಿಗೆ ಪ್ರವೇಶವಿರಲಿಲ್ಲ.

ರೋಗ ನಿವಾರಣೆ, ಉಪಶಮನದ ಬಹಳ ಕಾಲದಿಂದ ಹೆಂಗಸರು ಒಲಿಸಿಕೊಂಡ ಕಲೆ. ಆದರೆ ವೈದಕೀಯ ಸಂಸ್ಥೆಯಾಗಿ ಪ್ರತಿಷ್ಠಾಪಿತವಾದೊಡನೆ, ಹೆಂಗಸರನ್ನು ವೈದ್ಯರಂಗದಿಂದ ನಿಷೇಧಿಸಲಾಯಿತು. ಪ್ರಾಚೀನ ಈಜಿಪ್ಟಿನಲ್ಲಿ, ಗ್ರೀಕ್ ದೇಶದಲ್ಲಿ, ರೋಮಿನಲ್ಲಿ, ಮಧ್ಯಕಾಲದಲ್ಲಿ ಮಹಿಳಾ ವೈದ್ಯರಿದ್ದರು. ಆದರೆ ವೈದ್ಯ ಸಂಸ್ಥೆಗಳ ಸ್ಥಾಪನೆಯ ನಂತರ ಮನೋಭಾವಗಳೇ ಬದಲಾದವು, ರೋಗ ನಿವಾರಿಸಿದ ಮಹಿಳಾ ವೈದ್ಯರನ್ನು ‘ಮಾಟಗಾತಿ’ಯರೆಂದು ಬೇಟೆಯಾಡಿದರು, 19ನೇ ಶತಮಾನದ ಮಧ್ಯಭಾಗದ ಹೊತ್ತಿಗಷ್ಟೇ ಬಹಳಷ್ಟು–ವಿರೋಧದ ನಡುವೆಯೂ ಮಹಿಳೆಯರಿಗೆ ಮತ್ತೆ ವೈದ್ಯರಾಗುವ ಅವಕಾಶ ದೊರೆಯಿತು.

## ಸಾಲು ದೀಪವಾದವರು

ಇಂಥಾ ಅಡೆತಡೆಗಳ ನಟ್ಟ ನಡುವಿನಲ್ಲೂ ಮಹಿಳಾ ವಿಜ್ಞಾನಿಗಳ ಅದ್ಭುತ ಪರಂಪರೆ ಇದೆ.

ಕ್ರಿಸ್ತಶಕ 370ರಲ್ಲಿ ಜನಿಸಿದ ಹಿಪಾಟಿಯ ಮೇಧಾವಿ ಗಣಿತಜ್ಞೆ, ತತ್ತ್ವಜ್ಞಾನಿ ಹಾಗೂ ಖಗೋಳ ಶಾಸ್ತ್ರಜ್ಞೆಯಾಗಿದ್ದಳು. ಅಲೆಕ್ಸಾಂಡ್ರಿಯಾ ಮಹಾವಿಶ್ವವಿದ್ಯಾಲಯದ ಪ್ರಾಧ್ಯಾಪಕಿಯಾಗಿದ್ದ ಈಕೆ ಪ್ಲೇಟೋ

ಮತ್ತು ಅರಿಸ್ಟಾಟಲ್‌ನ ತತ್ತ್ವಶಾಸ್ತ್ರವ ಬೋಧಿಸಿದಳು. ಅಲೆಕ್ಸಾಂಡ್ರಿಯಾದಲ್ಲಿ ಹೊಸ ಕ್ರಿಸ್ತ ಧರ್ಮ ಹರಡುತ್ತಿದ್ದ ಸಂದರ್ಭ, ಗ್ರೀಕ್ ಧಾರ್ಮಿಕ ನಂಬಿಕೆಗಳಿಗೆ ನಿಷ್ಠಳಾದ ಹಿಪಾಟಿಯಾಳ ಬದುಕು ಅಪಾಯದಲ್ಲಿತ್ತು. ಕ್ರಿಸ್ತ ಶಕ 415 ರಲ್ಲಿ ಧಾರ್ಮಿಕ ಮತಾಂಧತೆಯ ಗಲಭೆಯಲ್ಲಿ ಅತ್ಯಂತ ಧಾರುಣವಾಗಿ ಕೊಲೆಗೀಡಾದ ಹಿಪಾಟಿಯಾಳ ಜೊತೆಯೇ ಗ್ರೀಕ್ ಗಣಿತ ಶಾಸ್ತ್ರದ ಮಹತ್ವರ ಯುಗ ಕೊನೆಗೊಂಡಿತು.

1750ರಲ್ಲಿ ಹುಟ್ಟಿದ ಕ್ಯಾರೋಲಿನ್ ಹರ್‌ಶೆಲ್ ಖಗೋಳ ಶಾಸ್ತ್ರಜ್ಞಳಾಗಿದ್ದು ಮೂರು ನಕ್ಷತ್ರ ಪುಂಜಗಳನ್ನು, 18 ಧೂಮಕೇತುಗಳನ್ನು ಕಂಡುಹಿಡಿದಳು. ಗೃಹ ಕಾರ್ಯಗಳಲ್ಲಿ ತಾಯಿಗೆ ಸಹಾಯಕಳಾಗಿ ಮುಗಿದು ಹೋಗುತ್ತಿದ್ದ ಕ್ಯಾರೋಲಿನ್‌ಳ ಜೀವನ, ಸಹೋದರನ ಆಹ್ವಾನದಲ್ಲಿ ಹೊಸ ಬೆಳಕು ಕಂಡಿತು, ಸಹೋದರ ವಿಲಿಯಮ್ ಸಂಗೀತ ಶಿಕ್ಷಕ. ಆಕೆ ವಿಲಿಯಮ್‌ನ ಜೊತೆ ಕ್ರೈಸ್ತರ ಆರಾಧನಾ ಮಂದಿರದಲ್ಲಿ ಹಾಡುತ್ತಿದ್ದಳು. ವಿಲಿಯಂ ಹವ್ಯಾಸಿ ಖಗೋಳ ಶಾಸ್ತ್ರಜ್ಞ. ಆತನಿಗೆ ಗಾಜಿನ ಲೆನ್ಸ್ ತಯಾರಿಸಲು ಸಹಾಯಕಳಾದ ಕ್ಯಾರೋಲಿನ್, ಸಣ್ಣ ದೂರದರ್ಶಕದ ಮೂಲಕ ಆಕಾಶಕಾಯಗಳ ಅಧ್ಯಯಿಸಿ ಅಲ್ಲಿಯವರೆಗೂ ದಾಖಲಾದ 561 ನಕ್ಷತ್ರಗಳ ಪಟ್ಟಿ ಮಾಡಿ, 'ರಾಯಲ್ ಸೊಸೈಟಿ'ಗೆ ಒಪ್ಪಿಸಿದಳು. ವಿವಾಹದ ನಂತರವೂ ತನ್ನ ಆಸಕ್ತಿಯ ಉಳಿಸಿಕೊಂಡು 2,500 ನಕ್ಷತ್ರಪುಂಜಗಳ ಕ್ರಮವಾಗಿ ಪಟ್ಟಿ ಇಳಿಸಿದಳು. 1828 ರಲ್ಲಿ 'ಅಸ್ಟ್ರೊನೋಮಿಕ್ ಸೊಸೈಟಿ' ಆಕೆಗೆ ಚಿನ್ನದ ಪದಕ ನೀಡಿ ಗೌರವಿಸಿತು.

1776ರಲ್ಲಿ ಫ್ರಾನ್ಸ್ ದೇಶದಲ್ಲಿ ಹುಟ್ಟಿದ ಸೋಫಿಯಾ ಜರ್‌ಮೇನ್ ಗಣಿತ ಮತ್ತು ಭೌತಶಾಸ್ತ್ರಕ್ಕೆ ಅಪಾರ ಕೊಡುಗೆ ನೀಡಿದ ಮಹಿಳೆ, ಬಹು ಮುಖ್ಯವಾಗಿ ಈಕೆ ಮಹಿಳೆಯರನ್ನು ವಿಜ್ಞಾನದಿಂದ ದೂರವಿಡುವ ಅಡ್ಡಗೋಡೆಗಳ ಬೀಳಿಸಲು ಹೋರಾಡಿದಳು. ಶ್ರೀಮಂತ ಮನತನದಲ್ಲಿ ಹುಟ್ಟಿದ ಈಕೆ ಹಣವನ್ನು ಕುರಿತು ಅನಾಸಕ್ತಳಾಗಿದ್ದು, ತಂದೆಯ ಗ್ರಂಥಾಲಯದಲ್ಲಿ ಬಹುಪಾಲು ಸಮಯ ಕಳೆಯುತ್ತಿದ್ದಳು. ಗಣಿತ ಈಕೆಯ ಸ್ವಂತ ಕಲಿಕೆ, ತೀವ್ರ ಆಸಕ್ತಿಯ ರಂಗ, ಸೋಫಿಯಾಳ ಪುಸ್ತಕದ ಆಸಕ್ತಿ, ಗಣಿತದ ಕುತೂಹಲ ಹೆಣ್ಣು ಮಕ್ಕಳ ಆರೋಗ್ಯಕ್ಕೆ ಒಳ್ಳೆಯದಲ್ಲವೆಂದು ತಾಯಿ-ತಂದೆಯರು ತಡೆಯತೊಡಗಿದರು. ಹಾಗಾಗಿ ಮನೆಯವರೆಲ್ಲಾ ಮಲಗಿದ ಮೇಲೆ, ಚಳಿ ರಾತ್ರಿಯಲ್ಲೂ ದಪ್ಪ ಛಾದರ ಹೊದ್ದು ಮೊಂಬತ್ತಿಯ ಸಣ್ಣ ಬೆಳಕಲ್ಲಿ ತನ್ನ ಅಧ್ಯಯನ ಮುಂದುವರೆಸಿದಳು. ತಾಂತ್ರಿಕ ತರಬೇತಿಯ ಬಯಸಿದರೂ ಆಕೆಗೆ ಆ ಅವಕಾಶಗಳಿರಲಿಲ್ಲ. ಜರ್ಮನ್ ಗಣಿತಜ್ಞ ಪ್ರೆಡರಿಕ್ ಗಾಸ್‌ನ ಸಂಕೀರ್ಣ ಪುಸ್ತಕವನ್ನು ಅರ್ಥಮಾಡಿಕೊಂಡ ಈಕೆ, ಗಂಡು ಹೆಸರಲ್ಲಿ ಆತನೊಡನೆ ಪತ್ರ ವ್ಯವಹಾರ ನಡೆಸಿದಳು. ಹೆಣ್ಣೆಂದು ತಿಳಿದರೆ ಅಪಹಾಸ್ಯಕ್ಕೆ ಗುರಿಯಾಗುವ ಭಯವಿತ್ತು. ಆಕೆಯ 'ನಂಬರ್ ಥಿಯರಿ' ಮತ್ತು 'ಥಿಯರಿ ಆಫ್ ಎಲಾಸ್ಟಿಸಿಟಿ' ಬಹುಕಾಲ ಉಳಿದ ಮುಖ್ಯ ಕೆಲಸಗಳು. ನೆಪೋಲಿಯನ್, ಪ್ರಸಿದ್ಧ ಭೌತಶಾಸ್ತ್ರಜ್ಞ ಎಪ್.ಎಪ್. ಕ್ಲಾಡ್ನಿಯ ಎಲಾಸ್ಟಿಕ್ ತಟ್ಟೆಗಳ ಕಂಪನವನ್ನು ಕುರಿತಾದ ಶ್ರೇಷ್ಠ ಪ್ರಯೋಗಗಳಿಗೆ ಸಮರ್ಪಕ ಉತ್ತರ ನೀಡಿದವರಿಗೆ ಒಂದು ಕಿ.ಲೋ. ಚಿನ್ನದ ಪದಕ ನೀಡುವುದಾಗಿ ಸಾರಿದ್ದ. ಅಂಥಾ ಕ್ಲಿಷ್ಟ ಸಮಸ್ಯೆಯ ಪರಿಹಾರಕ್ಕೆ ಪ್ರಯತ್ನಿಸಿದ ಸೋಫಿಯಾ ಜರ್‌ಮೇನ್, ಆ ಬಹುಮಾನವನ್ನು ಗೆದ್ದಳು, 1831ರಲ್ಲಿ ಸೋಫಿಯಾ ಸ್ತನದ ಕ್ಯಾನ್ಸರ್‌ನಿಂದ ಸತ್ತಳು. ಆಕೆಯ ವಿಜ್ಞಾನದ ಕೊಡುಗೆ ಎಷ್ಟೇ ದೊಡ್ಡದಿದ್ದರೂ 'ಫ್ರೆಂಚ್ ವಿಜ್ಞಾನದ ಅಕಾಡಮಿ' ಹೆಣ್ಣೆಂಬ ಕಾರಣಕ್ಕೆ ಆಕೆಗೆ ಪ್ರವೇಶ ನೀಡಲಿಲ್ಲ.

1780ರಲ್ಲಿ ಜನಿಸಿದ ಮೇರಿ ಸೋಮರ್‌ವಿಲ್ಲಿಯಾ ಶಾಸ್ತ್ರೀಯ ವಿದ್ಯಾಭ್ಯಾಸವಿಲ್ಲದೆಯೂ,

ಯಾರ ಮಾರ್ಗದರ್ಶನವಿಲ್ಲದೆಯೂ ಸ್ವಂತ ಕಲಿಕೆ, ಅಧ್ಯಯನದಿಂದ ಅಂತರರಾಷ್ಟ್ರೀಯ ಮಟ್ಟದ ಗಣಿತಜ್ಞಳಾದಳು, ಖಗೋಳ ಶಾಸ್ತ್ರಜ್ಞಳಾದಳು, ಬೀಜಗಣಿತವನ್ನು ಓದಿ ಆಕರ್ಷಿತಳಾದ ಈಕೆಗೆ ತಾನು ಬಯಸಿದ್ದನ್ನು ಓದುವುದೂ ಸುಲಭವಿರಲಿಲ್ಲ. ಸ್ತ್ರೀಯರ ಆರೋಗ್ಯಕ್ಕೆ ಗಣಿತ ಒಳ್ಳೆಯದಲ್ಲವೆಂದು ಮೊಂಬತ್ತಿಯನ್ನು ಆರಿಸಿ ಬಿಡುವ ಕೌಟುಂಬಿಕ ವಿರೋಧದ ನಡುವೆ ಈಕೆ ಇಡೀ ಗಣಿತದ ಸಮಸ್ಯೆಯ ನೆನಪಿನಲ್ಲಿಟ್ಟುಕೊಂಡು, ರಾತ್ರಿಯ ಕತ್ತಲಲ್ಲಿ ಮನಸ್ಸಿನಲ್ಲೇ ಸಮಸ್ಯೆಯ ಕುರಿತು ಕೆಲಸ ಮಾಡಿ ಉತ್ತರಗಳ ಕಂಡುಕೊಳ್ಳುತ್ತಿದ್ದಳು. ಅನೇಕ ವೈಜ್ಞಾನಿಕ ಪ್ರಬಂಧಗಳ ಬರೆದು ಅನುವಾದಿಸಿದ ಈಕೆ 1835ರಲ್ಲಿ 'ರಾಯಲ್ ಅಸ್ಟ್ರೋನೋಮಿಕಲ್ ಸೊಸೈಟಿ'ಗೆ ಚುನಾಯಿತರಾದ ಮೊಟ್ಟ ಮೊದಲ ಇಬ್ಬರು ಮಹಿಳೆಯರಲ್ಲಿ ಒಬ್ಬಳು. 1807ರಲ್ಲಿ ಮೇರಿಯ ಪತಿ ಮರಣಿಸಿದಾಗ, ಮೇರಿ ಮಗನೊಡನೆ ಸ್ಕಾಟ್‌ಲ್ಯಾಂಡ್‌ಗೆ ಹಿಂತಿರುಗಿ ತನ್ನ ವಿದ್ಯಾಭ್ಯಾಸವನ್ನು ಗಂಭೀರವಾಗಿ ಆರಂಭಿಸಿದಳು. 1812 ರಲ್ಲಿ ಸೇನೆಯ ವೈದ್ಯನಾಗಿದ್ದ ವಿಲಿಯಂ ಸೋಮರ್ ವಿಲ್ಲಿಯ ವಿವಾಹವಾದ ಈಕೆ ಪತಿಯ ಪ್ರೋತ್ಸಾಹದಿಂದ ಮೇಧಾವಿ ಗಣಿತಜ್ಞರ, ವಿಜ್ಞಾನಿಗಳ ಸಂಗವನ್ನು ಪಡೆದಳು. 92 ವರ್ಷಗಳ ದೀರ್ಘ ಕಾಲ ಬದುಕಿದ್ದ ಮೇರಿ ಸೋಮರ್‌ವಿಲ್ಲಿ 1872ರಲ್ಲಿ ನಿದ್ರೆಯಲ್ಲೇ ಶಾಂತವಾಗಿ ಬದುಕು ಮುಗಿಸಿದ್ದಳು.

1815 ರಲ್ಲಿ ಜನಿಸಿದ ಆಡಾ ಅಗುಸ್ಟಾ ಇಂದು ಪ್ರಸಿದ್ಧಳಾಗಿದ್ದರೆ, ಅದಕ್ಕೆ ನಾವಿರುವ ಕಂಪ್ಯೂಟರ್ ಯುಗವೇ ಕಾರಣ. 'ಆಡಾ' ಇಂದು ಕಂಪ್ಯೂಟರ್ ಭಾಷೆಯಾಗಿ ಚಿರಪರಿಚಿತವಾಗಿದೆ, 1970 ರ ದಶಕದ ಕೊನೆಗೆ, ಅಮೇರಿಕೆಯ ರಕ್ಷಣಾ ವಿಭಾಗವು ಮಿಲಿಟರಿ ಉಪಯೋಗಕ್ಕಾಗಿ ಕಂಡುಹಿಡಿದ ಕಂಪ್ಯೂಟರ್ ಭಾಷೆಗೆ ಆಡಾಳ ಹೆಸರಿಟ್ಟು ಗೌರವಿಸಿತು.

---

**ಇಂದು ಕಂಪ್ಯೂಟರ್ ಎಲ್ಲೆಡೆಯೂ ನುಗ್ಗಿರುವ ಕಾಲ. ಆದರೆ ಜಗತ್ತಿನ ಮೊಟ್ಟ ಮೊದಲ ಕಂಪ್ಯೂಟರ್ ಪ್ರೋಗ್ರಾಮರ್ ಆಡಾ ಅಗುಸ್ಟಾ ಎಂಬ ಮಹಿಳೆ ಎಂದು ಬಹಳ ಜನಕ್ಕೆ ತಿಳಿದಿರಲಿಕ್ಕಿಲ್ಲ. ಆಡಾ ಲಾರ್ಡ್ ಬೈರನ್ನನ ಮಗಳು, ಗಣಕ ಯಂತ್ರಗಳ ಕಂಡು ಹಿಡಿದ ಚಾರ್ಲ್ಸ್ ಬ್ಯಾಬೇಜನ ಆತ್ಮೀಯ ಸ್ನೇಹಿತೆ. ಮೇಧಾವಿ ಗಣಿತಜ್ಞೆ. ಆಡಾ ತನ್ನ ಗಣಿತದ ಜ್ಞಾನದಿಂದ ಬ್ಯಾಬೇಜನ ಯಂತ್ರಗಳೊಡನೆ ಸಂಪರ್ಕಿಸುವ ವಿಧಾನಗಳ ಕಂಡುಹಿಡಿದಳು. ಈ ಯಂತ್ರಗಳ 'ಪ್ರೋಗ್ರಾಮ್' ಮಾಡಬಹುದೆಂದು ತಿಳಿಸಿ, ಮೊಟ್ಟ ಮೊದಲ ಉದಾಹರಣೆಗಳ ಮುಂದಿಟ್ಟಳು.**

---

36 ನೇ ವಯಸ್ಸಿಗೇ ಕ್ಯಾನ್ಸರ್‌ಗೆ ತುತ್ತಾದ ಆಡಾಳನ್ನು ಇತಿಹಾಸ ಹೆಚ್ಚು ಕಮ್ಮಿ ಮರತೇ ಬಿಟ್ಟಿತ್ತು. ಇದೀಗ ಆಧುನಿಕ ಜಗತ್ತಿನಲ್ಲಿ ಕಂಪ್ಯೂಟರ್‌ಗಳು ಪ್ರಮುಖ ಪಾತ್ರ ವಹಿಸಿದ್ದು ಗಣಿತ ಮತ್ತು ವಿಜ್ಞಾನಕ್ಕೆ ಆಡಾ ನೀಡಿದ ಕೊಡುಗೆಯತ್ತ ವಿಜ್ಞಾನಿಗಳ ಗಮನ ಹರಿದಿದೆ. ಆಕೆ ತನ್ನ ಕಾಲದಿಂದ ಒಂದು ಶತಮಾನದಷ್ಟು ಮುಂದಕ್ಕೆ ಯೋಚಿಸಿ, ಕಂಪ್ಯೂಟರ್‌ಗಳಿಗೆ ಕಾರ್ಯ ನಿರ್ದೇಶಿಸುವ, ಅವುಗಳೊಡನೆ ಸಂಭಾಷಿಸುವ ಬಗೆಯನ್ನು ವಿವರಿಸಿದಳು. ಶ್ರೀಮಂತ ವಿಲಿಯಂ ಲವ್‌ಲೇಸ್‌ನನ್ನು ವಿವಾಹವಾದ ಆಡಾ ಸುಖೀ ವೈವಾಹಿಕ ಜೀವನವನ್ನು ಕಂಡಳು. ಪತ್ನಿಯ ಮೇಧಾವಿತನವನ್ನು, ಪ್ರತಿಭೆಯನ್ನು ಅತ್ಯಂತ ಸಹಜವಾಗಿ, ನಿಗರ್ವದಿಂದ ವಿಲಿಯಂ ಸ್ವೀಕರಿಸಿದ್ದ. 1852ರಲ್ಲಿ ಈಕೆ ಕ್ಯಾನ್ಸರ್‌ಗೆ ತುತ್ತಾದಳು.

1821 ರಲ್ಲಿ ಹುಟ್ಟಿದ ಡಾ॥ ಎಲಿಜಬೆತ್ ಬ್ಲಾಕ್‌ವೆಲ್ ಅಮೇರಿಕೆಯ ವೈದ್ಯ ಪದವಿ ಪಡೆದ ಮೊಟ್ಟ ಮೊದಲ ಮಹಿಳೆ. ಬ್ರಿಟನ್ನಿನಲ್ಲಿ ಹುಟ್ಟಿದ ಈಕೆಯ ಏಳನೇ

ವಯಸ್ಸಿನಲ್ಲಿ, ಎಲಿಜಬೆತ್‌ಳ ತಂದೆ ನ್ಯೂಯಾರ್ಕ್‌ಗೆ ವಲಸೆ ಹೋದ. ಆದರೆ ತಂದೆಯ ಸಾವಿನಿಂದಾಗಿ, ತಾಯಿ ಎಂಟು ಮಕ್ಕಳ ಪೋಷಿಸುವ ಜವಾಬ್ದಾರಿ ಹೊತ್ತು ನಿಲ್ಲಬೇಕಾಯಿತು. ಸಹೋದರಿಯರು ಸೇರಿಕೊಂಡು ಶಾಲೆ ನಡೆಸಿದರು. ಎಲಿಜಬೆತ್ ಅದರ ಮುಖ್ಯಸ್ಥೆಯಾದಳು. ಮಕ್ಕಳಿಗೆ ಪಾಠ ಹೇಳಿಕೊಡುತ್ತಲೇ ಎಲಿಜಬೆತ್ ತನ್ನ ಒಲವು ಹರಿದಿದ್ದ ವೈದ್ಯರಂಗಕ್ಕೆ ಪ್ರವೇಶಿಸಲು ಯತ್ನಿಸಿದಳು. 1844 ರಲ್ಲಿ ಫಿಲಡಲ್ಫಿಯಾ ಮತ್ತು ನ್ಯೂಯಾರ್ಕ್‌ನ ವೈದ್ಯ ಶಾಲೆಗಳು ಸ್ತ್ರೀಯೆಂಬ ಕಾರಣದಿಂದಾಗಿ ಎಲಿಜಬೆತ್‌ಳಿಗೆ ಪ್ರವೇಶ ನೀಡಲಿಲ್ಲ. ಕಡೆಗೆ ಜೇನಿವಾದ ವೈದ್ಯಕೀಯ ಕಾಲೇಜು ಸೇರಿದ ಈಕೆಗೆ ಬಹಳಷ್ಟು ವಾದ ವಿವಾದ ನಂತರ 1849ರಲ್ಲಿ ಪದವಿ ನೀಡಿದರು. 1853ರಲ್ಲಿ ಎಲಿಜಬೆತ್ ಮತ್ತಿಬ್ಬರು ಮಹಿಳಾ ವೈದ್ಯರೊಡಗೂಡಿ ನ್ಯೂಯಾರ್ಕ್‌ನಲ್ಲಿ ಮಹಿಳೆಯರಿಗೆಂದೇ ವೈದ್ಯಕೀಯ ಕಾಲೇಜನ್ನು ತೆರೆದಳು, ಕಟು ವಿರೋಧದ ನಡುವೆ ಅವರು 1857 ರಲ್ಲಿ ಮಹಿಳೆಯರಿಗೇ ಮೀಸಲಾದ ಆಸ್ಪತ್ರೆಯನ್ನು ಸ್ಥಾಪಿಸಿದರು. 1858 ರಲ್ಲಿ ಇಂಗ್ಲೆಂಡಿಗೆ ಹಿಂತಿರುಗಿದ ಈಕೆ ದೇಶದುದ್ದಕ್ಕೂ ಉಪನ್ಯಾಸಗಳ ನೀಡಿ ಮಹಿಳೆಯರನ್ನು ವೈದ್ಯರಂಗಕ್ಕೆ ಸೇರುವಂತೆ ಒತ್ತಾಯಿಸಿದಳು, ಪ್ರೋತ್ಸಾಹಿಸಿದಳು. 1859ರಲ್ಲಿ 'ಬ್ರಿಟಿಷ್ ಮೆಡಿಕಲ್ ರಿಜಿಸ್ಟರ್' ನಲ್ಲಿ ದಾಖಲಾದ ಮೊದಲ ಮಹಿಳೆ ಈಕೆ.

1878 ರಲ್ಲಿ ಹುಟ್ಟಿದ ಲೀ ಮೇಟ್ನರ್ ಮೇಧಾವಿ ಭೌತಶಾಸ್ತ್ರಜ್ಞೆ. 1907 ರಲ್ಲಿ ಪ್ರಸಿದ್ಧ ಭೌತಶಾಸ್ತ್ರಜ್ಞ ಮ್ಯಾಕ್ಸ್ ಪ್ಲಾಂಕ್‌ನೊಡನೆ ಕೆಲಸ ಮಾಡಿದ ಈಕೆ ನಂತರ, ಬರ್ಲಿನ್‌ನ ಕೆ. ಡಬ್ಲ್ಯು. ಇನ್‌ಸ್ಟಿಟ್ಯೂಟ್‌ನಲ್ಲಿ ವಿಕಿರಣಶೀಲ ಭೌತಶಾಸ್ತ್ರ' ವಿಭಾಗದ ಮುಖ್ಯಸ್ಥೆಯಾದಳು. ಪ್ರೊಟಾಕ್ಟಿನಿಯಮ್ ಮೂಲಧಾತುವನ್ನು ಕಂಡು ಹಿಡಿದ ಈಕೆ ನಂತರ, ಯುರೇನಿಯಂ ವಿಭಜನೆಯನ್ನೂ ಕಂಡು ಹಿಡಿದಳು. ಆದರೆ 1944ರಲ್ಲಿ ಆಕೆಯ ಜೊತೆ ಕೆಲಸ ಮಾಡಿದ ಓಟೋ ಹಾನ್‌ಗೆ ನೋಬಲ್ ಪಾರಿತೋಷಕ ಸಂದಿತು, ಸರಿಸಮಾನವಾಗಿ ದುಡಿದ ಲೀ ಮೇಟ್ನರ್‌ಳ ಹೆಸರೇ ಇರಲಿಲ್ಲ, ಪರಮಾಣು ವಿಭಜನೆಯಲ್ಲಿ ಮೊಟ್ಟ ಮೊದಲಿಗಳಾದರೂ ಈ ವಿಜ್ಞಾನಿ ಅಣುಬಾಂಬ್ ತಯಾರಿಸಲು ನಿರಾಕರಿಸಿದಳು. ಇಂಗ್ಲೆಂಡಿಗೆ ಹಿಂತಿರುಗಿದ ಈಕೆ 1968ರಲ್ಲಿ ಮೃತಳಾದಳು.

1885 ರಲ್ಲಿ ಹುಟ್ಟಿದ ಅಮೆರಿಕೆಯ ಕಾರೆನ್ ಹಾರ್ನಿ, ಫ್ರಾಯಿಡ್‌ನ 'ಸ್ತ್ರೀಯರ ಮನಃಶಾಸ್ತ್ರವನ್ನು ಕುರಿತಾದ ಸಿದ್ಧಾಂತಗಳ ತಿರಸ್ಕರಿಸಿದ ಮೊಟ್ಟ ಮೊದಲ ಮನಃಶಾಸ್ತ್ರಜ್ಞೆ. ಫ್ರಾಯ್ಡ್‌ನ ಈ ಸಿದ್ಧಾಂತವನ್ನು 'ಗಂಡು ಮನಃಶಾಸ್ತ್ರದ ನ್ಯೂನತೆ ಎಂದು ಸಾಧಿಸಿದಳು. ಫ್ರಾಯ್ಡ್‌ನ ತತ್ವಗಳ ಪ್ರಶ್ನಿಸಿದ ಈಕೆಗೆ ಪುರುಷ ಪ್ರಧಾನ ಸಂಸ್ಕೃತಿ ಮಹಿಳೆಯರ ಮಾನಸಿಕ ರೋಗಗಳಿಗೆ ಕಾರಣವಿರಬೇಕೆನಿಸಿತು. ಆಕೆಯ ಈ ಅಭಿಪ್ರಾಯದಿಂದಾಗಿ ಆಕೆಯನ್ನು 'ನ್ಯೂಯಾರ್ಕ್ ಮನೋವಿಶ್ಲೇಷಣಾ ಸಂಸ್ಥೆಯಿಂದ ಹೊರ ಹಾಕಿದರು, ಆಕೆಯ ಸಿದ್ಧಾಂತಗಳು ಅಮೇರಿಕೆಯಲ್ಲಿ ಜನಪ್ರಿಯವಾಗಲಿಲ್ಲ. ತನ್ನ ಅಭಿಪ್ರಾಯಗಳಿಂದಾಗಿ ಜೀವನೋಪಾಯವನ್ನು ಕಳಕೊಳ್ಳಬೇಕಾದರೂ ಲಕ್ಷಿಸಲಿಲ್ಲ. ಅವಳ ಕೆಲಸಕ್ಕೆ ಎಲ್ಲಿಲ್ಲದ ಸ್ಪರ್ಧೆ ಇತ್ತು. ನಾಜಿಗಳಿಂದ ತಪ್ಪಿಸಿಕೊಳ್ಳಲು ಯುರೋಪಿನಿಂದ ವಲಸೆ ಬಂದ ವಿಜ್ಞಾನಿಗಳು ಬಹುಸಂಖ್ಯೆಯಲ್ಲಿದ್ದರು ಧೃತಿಗೆಡದ ಕಾರೆನ್ ತನ್ನದೇ ಆದ ಮನೋವಿಶ್ಲೇಷಣಾ ಸಂಸ್ಥೆಯ ಸ್ಥಾಪಿಸಿ ಯಶಸ್ವಿಯಾದಳು, 1922 ರಷ್ಟು ಹಿಂದೆಯೇ ಆಕೆ ಫ್ರಾಯ್ಡ್‌ನ ಪ್ರಸಿದ್ಧ 'ಪೆನಿಸ್ ಎನ್ವಿ' ಸಿದ್ಧಾಂತವನ್ನು ವಿರೋಧಿಸಿ, 'ಊಂಬ್ ಎನ್ವಿ' ಸಿದ್ಧಾಂತವ ಮುಂದಿಟ್ಟಳು. 1952 ರಲ್ಲಿ ಈಕೆ ಕ್ಯಾನ್ಸರ್ ನಿಂದ ಮೃತಳಾದಳು.

---

1887 ರಲ್ಲಿ ಅಮೆರಿಕೆಯಲ್ಲಿ ಹುಟ್ಟಿದ ರೂತ್ ಬೆನೆಡಿಕ್ಟ್ ತನ್ನ 'ಸಂಸ್ಕೃತಿಯ ಮಾದರಿ'ಗಳೆಂಬ ಹೊಚ್ಚ ಹೊಸ ಸಿದ್ಧಾಂತಗಳಿಂದ ಮಾನವಶಾಸ್ತ್ರದಲ್ಲೇ ಕ್ರಾಂತಿ ಎಬ್ಬಿಸಿದಾಕೆ. ತೀವ್ರವಾದ 'ಫೀಲ್ಡ್ ವರ್ಕ್' ಮೇಲೆ ಆಧಾರಿತವಾಗಿದ್ದ 1934 ರಲ್ಲಿ ಪ್ರಕಟವಾದ ಈಕೆಯ ಪುಸ್ತಕ 'Patterns of Culture' ಮಾನವಶಾಸ್ತ್ರದ ದಿಕ್ಕನ್ನೇ ಬದಲಿಸಿತು. 14 ಭಾಷೆಗಳಿಗೆ ಅನುವಾದಗೊಂಡ ಈ ಪುಸ್ತಕ 'ಪ್ರತಿಯೊಂದು ಸಂಸ್ಕೃತಿಗೂ ತನ್ನದೇ ಆದ ವ್ಯಕ್ತಿತ್ವ'ವಿದೆಯೆಂಬ ಸಿದ್ಧಾಂತವನ್ನು ಮುಂದಿಟ್ಟಿತು. ಕೊಲಂಬಿಯಾದಲ್ಲಿ ಪ್ರೊಫೆಸರ್ ಹುದ್ದೆಯಲ್ಲಿ ದುಡಿದ ಈಕೆ 1948 ರಲ್ಲಿ ತೀರಿಕೊಂಡಳು.

---

1907ರಲ್ಲಿ ಅಮೇರಿಕೆಯಲ್ಲಿ ಜನಿಸಿದ ರ್‍ಯಾಖೇಲ್ ಕಾರ್‌ಸೆನ್ ಪ್ರಸಿದ್ಧ ಜೀವಶಾಸ್ತ್ರಜ್ಞೆ. ಕೀಟನಾಶಕಗಳಿಂದ ಪರಿಸರಕ್ಕುಂಟಾಗುವ ಹಾನಿಯನ್ನು ಅಧ್ಯಯಿಸಿದ ಈಕೆಯ ಕೆಲಸ, ಅಮೇರಿಕೆಯಲ್ಲಿ 'ಡಿಡಿಟಿ' ಉಪಯೋಗವನ್ನು ನಿಷೇಧಿಸುವಂತೆ ಮಾಡಿತು. 1962 ರಲ್ಲಿ ಪ್ರಕಟಗೊಂಡ ಈಕೆಯ ಪುಸ್ತಕ 'Sailent Spring' ಬೆಳೆಯನ್ನು ಹಾಳುಮಾಡುವ ಕೀಟಗಳ ನಾಶಮಾಡಲು ತಯಾರಿಸಿದ ಕೀಟನಾಶಕಗಳು, ನದಿಗಳನ್ನು ಸೇರಿ ಮೀನುಗಳ ನಾಶ ಮಾಡಿ ಆ ಮೂಲಕ ಮೀನುಗಳ ತಿಂದು ಬದುಕುವ ಪಕ್ಷಿಗಳ ಅಂತ್ಯಕ್ಕೆ ಕಾರಣವಾಗಿ ಪ್ರಕೃತಿಯಲ್ಲಿ ಉದ್ಭವಿಸಿದ ಅಸಮತೋಲವನ್ನು ವಿವರಿಸಿತು. ಶ್ರೇಷ್ಠ ಮಟ್ಟದ ಪರಿಸರದ ಅಧ್ಯಯನವಾದ ಈಕೆಯ ಸಂಶೋಧನೆ ಜಗತ್ತಿನೆಲ್ಲಾ ವಿಜ್ಞಾನಿಗಳ, ಸಾಮಾನ್ಯ ಜನರ ಗಮನವನ್ನು ಪರಿಸರ ರಕ್ಷಣೆಯ ಅವಶ್ಯಕತೆಯತ್ತ ಸೆಳೆಯಿತು. ಪರಿಸರ ಕುರಿತಂತೆ ಐದು ಪುಸ್ತಕಗಳ ಬರೆದ ಈಕೆಯ 'The Sea around us' ಎಂಬ ಪುಸ್ತಕ ಪ್ರಕಟವಾದ ವರ್ಷದಲ್ಲಿ ಎರಡೂವರೆ ಲಕ್ಷ ಪ್ರತಿಗಳು ಮಾರಾಟವಾದವು. 1964ರಲ್ಲಿ ಕಾರ್‌ಸೆನ್ ಕ್ಯಾನ್ಸರ್‌ಗೆ ತುತ್ತಾದಳು.

1920ರಲ್ಲಿ ಹುಟ್ಟಿದ ಬ್ರಿಟಿಷ್ ವಿಜ್ಞಾನಿ ರೋಸಾಲಿಂಡ್ ಫ್ರಾಂಕ್‌ಲಿನ್ ಅತ್ಯಂತ ಪ್ರತಿಭಾವಂತ ಕ್ರಿಸ್ಟಲೋಗ್ರಾಫರ್. ಆಕೆಯ ಕ್ಷ-ಕಿರಣ ಚಿತ್ರಗಳ DNA ಯ ಜೋಡಿ ಸುರುಳಿ ರಚನೆಯನ್ನು ಕಂಡುಹಿಡಿಯಲು ಮುಖ್ಯ ಸಾಧನವಾದವು. ರೋಸಾಲಿಂಡ್ ಕಟು ಪರಿಶ್ರಮದಿಂದ ಪಡೆದ ಸಂಶೋಧನಾ ಚಿತ್ರಗಳನ್ನು ಅನಾಮತ್ತು ಎತ್ತಿಕೊಂಡು ಅವುಗಳ ಆಧಾರದ ಮೇಲೆ ಜೋಡಿ ಸುರಳಿ ರಚನೆಯ ಕಂಡುಹಿಡಿದ ವ್ಯಾಟ್‌ಸನ್ ಮತ್ತು ಕ್ರಿಕ್ 1962ರಲ್ಲಿ ನೋಬಲ್ ಪಾರಿತೋಷಿಕ ಪಡೆದರು. ಅಷ್ಟರಲ್ಲಾಗಲೇ ರೋಸಾಲಿಂಡ್, ಕ್ಯಾನ್ಸರ್‌ಗೆ ತುತ್ತಾಗಿದ್ದಳು. ಕೇಂಬ್ರಿಡ್ಜ್‌ನಲ್ಲಿ ಡಾಕ್ಟರೇಟ್ ಪದವಿ ಪಡೆದ ರೋಸಾಲಿಂಡ್, ಲಂಡನ್ನಿನ ಕಿಂಗ್ಸ್ ಕಾಲೇಜನ್ನು ಸೇರಿಕೊಂಡಳು. 1951ರ ಜನವರಿಯಲ್ಲಿ DNA ಕುರಿತು ಸಂಶೋಧನೆ ಪ್ರಾರಂಭಿಸಿದ ಈಕೆ ನವೆಂಬರ್ ಹೊತ್ತಿಗೆ DNA ಯ ಒಂದು ರೂಪ ಸುರಳಿ ಆಕಾರದ್ದೆಂದು ಪ್ರಕಟಿಸಿದಳು. ಆಕೆಯ ಸಂಶೋಧನಾ 'ಡಾಟಾ'ಗಳ ಗಳಿಸಿದ ವ್ಯಾಟ್‌ಸನ್ ಮತ್ತು ಕ್ರಿಕ್ DNAಯ ಜೋಡಿ ಸುರಳಿ ರಚನೆಯನ್ನು 1953ರಲ್ಲಿ ಪ್ರಕಟಿಸಿಬಿಟ್ಟರು. ರೋಸಾಲಿಂಡ್ ಅದೇ ನಿರ್ಣಯದ ಬಲು ಹತ್ತಿರವಿದ್ದಳು. ತಮ್ಮ ಸಂಶೋಧನೆಯ ಯಶಸ್ಸಿಗೆ ಮೂಲ ಕಾರಣವಾದ ರೋಸಾಲಿಂಡ್‌ಳ 'ಡಾಟಾ'ಕ್ಕಾಗಿ ಕೃತಜ್ಞತೆ ವ್ಯಕ್ತಪಡಿಸುವ ಬದಲು, ವ್ಯಾಟ್‌ಸನ್ ತಾನು ಬರೆದ ಪುಸ್ತಕದಲ್ಲಿ, ಅದಾಗಲೇ ಮೃತಳಾಗಿದ್ದ ರೋಸಾಲಿಂಡ್‌ಳನ್ನು ಹಟಮಾರಿ ಹೆಣ್ಣಾಗಿ ಕೆಟ್ಟ ರೀತಿಯಲ್ಲಿ ಚಿತ್ರಿಸಿದ. ಆಕೆಯ ವೇಷಭೂಷಣ, ಉಡುಪನ್ನು ಟೀಕಿಸುತ್ತಾ, ತುಟಿಗೆ ರಂಗೂ ಹಚ್ಚದ ಹೆಣ್ತನವೊಂದೂ ಗುರುತರವಾಗಿ ಕಾಣದ ಹೆಣ್ಣೊಂದು ಬರೆದ. ಓರ್ವ ವಿಜ್ಞಾನಿಯನ್ನು ಆತ ವರ್ಣಿಸಿದ ರೀತಿ ಇದು. ರೋಸಾಲಿಂಟ್‌ಳ ಮೇಧಾವಿತನಕ್ಕೆ ತಕ್ಕ ಪುರಸ್ಕಾರ ದೊರೆಯಲೇ ಇಲ್ಲ, ಮತ್ತೆ ನಾಲ್ಕು ವರ್ಷಗಳ ಕಾಲ ಬದುಕಿದರೆ ನೋಬಲ್ ಪಾರಿತೋಷಿಕದಲ್ಲಿ ಭಾಗಿಯಾಗಬೇಕಿದ್ದ ಈಕೆ, ತನ್ನ ಅಕಾಲ ಸಾವಿನಲ್ಲಿ ಅಜ್ಞಾತಳಾದಳು.

1934ರಲ್ಲಿ ಜನಿಸಿದ ಜೇನ್ ಗುಡ್‌ಆಲ್ 'ಇಥಾಲೊಜಿ'ಯೆಂಬ ಹೊಸದೇ ವೈಜ್ಞಾನಿಕ ರಂಗಕ್ಕೆ ಜನ್ಮ ಕೊಟ್ಟವಳು. ಇತಾಲೊಜಿ ಸಹಜ ಪರಿಸರದಲ್ಲಿ ಪ್ರಾಣಿಗಳ ವರ್ತನೆಯ ಅಧ್ಯಯನವನ್ನು ಕುರಿತ ವಿಜ್ಞಾನ, ತನ್ನ 23ನೇವಯಸ್ಸಿಗೇ ಕೆನ್ಯಾಗೆ ಹೋದ ಈಕೆ ಚಿಂಪಾಂಜಿಗಳನ್ನು ಅವುಗಳ ಸಹಜ ವಾಸಸ್ಥಾನದಲ್ಲಿ ಅತಿ ನಿಕಟವಾಗಿ ಅಧ್ಯಯಿಸಿದಳು. ಆಕೆಯ ಆರು ವರ್ಷದ ಅಧ್ಯಯನ ಸಸ್ತನಿಗಳ ಕುರಿತಾದ ಅತ್ಯುತ್ತಮ 'ಫೀಲ್ಡ್ ವರ್ಕ್' ಎನಿಸಿಕೊಂಡಿದೆ. ಚಿಂಪಾನ್ಸಿಗಳ ಕುರಿತ ಆಕೆಯ ಅಧ್ಯಯನ ಅತ್ಯಂತ ಮುಖ್ಯ ವೈಜ್ಞಾನಿಕ ಅನ್ವೇಷಣೆಗಳಿಗೆ ಕಾರಣವಾಗಿದೆ. ಆಕೆಯ ಸಹನೆ, ಧೈರ್ಯ, ಛಲ, ಅತ್ಯಂತ ಸೂಕ್ಷ್ಮವಾಗಿ ಅವಲೋಕಿಸುವ ಶಕ್ತಿ, ಚಿಂಪಾನ್ಸಿಗಳ ಕುರಿತು ದಿಗ್ಭ್ರಮೆಯ ಸತ್ಯಗಳನ್ನು ಹೊರ ಹಾಕಿತು. ಚಿಂಪಾನ್ಸಿಗಳು ಮಾಂಸಕ್ಕಾಗಿ ಬೇಟೆಯಾಡುವುದನ್ನು, ಸಲಕರಣೆಗಳ ಉಪಯೋಗಿಸುವುದನ್ನು ಕಂಡುಹಿಡಿದ ಮೊಟ್ಟ ಮೊದಲ ವಿಜ್ಞಾನಿ ಈಕೆ.

## ನೋಬೆಲ್ ಪಾರಿತೋಷಿಕ ಪಡೆದವರು

ಮೇರಿಕ್ಯೂರಿಯಂತೆಯೇ ನೋಬಲ್ ಪಾರಿತೋಷಿಕ ಪಡೆದ ಅನೇಕ ಮಹಿಳಾ ವಿಜ್ಞಾನಿಗಳಿದ್ದಾರೆ, ಮೇರಿ ಕ್ಯೂರಿಯ ಹಿರಿಯ ಮಗಳು ಐರೀನ್ ಕ್ಯೂರಿ ತಾಯಿಯ ಹಾದಿಯಲ್ಲೇ ಹೆಜ್ಜೆ ಇಟ್ಟು 'ಕೃತಕ ವಿಕಿರಣಶೀಲತೆ'ಯ ಕಂಡು ಹಿಡಿದು ನೋಬಲ್ ಪಾರಿತೋಷಿಕ ಪಡೆದಳು. ಆದರೆ ವಿಕಿರಣದ ದುಶ್‌ಪರಿಣಾಮಕ್ಕೆ ತುತ್ತಾಗಿ 53ನೇ ವಯಸ್ಸಿಗೇ ರಕ್ತದ ಕ್ಯಾನ್ಸರ್‌ನಿಂದ ಮೃತಳಾದಳು. ರೋಸಾಲಿನ್ ಎಲ್ಲೋ ನೋಬೆಲ್ ಪಾರಿತೋಷಿಕ ಪಡೆದ ಮತ್ತೊಬ್ಬ ಮಹಿಳೆ. 1977ರಲ್ಲಿ ಈಕೆಯ RIA ತಂತ್ರಕ್ಕೆ ನೋಬೆಲ್ ಪಾರಿತೋಷಿಕ ದೊರೆಯಿತು. ವಿಕಿರಣಶೀಲತೆಯ ಉಪಯೋಗಿಸುವ ಈ ತಂತ್ರ ರಕ್ತದಲ್ಲಿರುವ ಅತ್ಯಂತ ಸಣ್ಣ ಪ್ರಮಾಣದ ಪದಾರ್ಥವನ್ನು ಗುರುತಿಸಬಲ್ಲದು. ಅಸಹಜ ಸಾವಿನ ಕೇಸುಗಳಲ್ಲಿ ಇಂಥಾ ರಕ್ತಪರೀಕ್ಷೆ ಅಪರಾಧದ ಸಾಬೀತಿಗೆ ಬಲು ಸಹಾಯಕಾರಿ. ಅನೇಕ ಕೊಲೆ ಕೇಸುಗಳನ್ನು ನಿಖರವಾಗಿ ಕಂಡುಹಿಡಿಯಲು ಈಗಾಗಲೇ ಈ ತಂತ್ರವನ್ನು ಬಳಸಲಾಗಿದೆ. 1910ರಲ್ಲಿ ಈಜಿಪ್ಟಿನಲ್ಲಿ ಹುಟ್ಟಿದ ಬ್ರಿಟಿಷ್ ವಿಜ್ಞಾನಿ. ಡೋರೋಥಿ ಹಾಡ್‌ಕಿನ್ ನೋಬೆಲ್ ಪಾರಿತೋಷಿಕ ಪಡೆದ ಮಹಿಳಾ ವಿಜ್ಞಾನಿ. ತೀವ್ರತರದ ಮಾರಕ ರಕ್ತಹೀನತೆಯ ವಿರುದ್ಧ ಹೋರಾಡುವ ವೈಟಮಿನ್ B-12 ರ ರಚನೆಯನ್ನು ವಿಶ್ಲೇಶಿಸಿದ ಈಕೆಗೆ 1964ರ ರಸಾಯನ ಶಾಸ್ತ್ರದ ನೋಬಲ್ ಪಾರಿತೋಷಿಕ ದೊರೆಯಿತು. ಪೂರಾ ಕ್ಷ-ಕಿರಣ ವಿಶ್ಲೇಷಣೆಯಿಂದಲೇ ಯಾವುದೇ ವಸ್ತುವಿನ ರಸಾಯನಿಕ ರಚನೆಯ ಕಂಡುಹಿಡಿಯಬಹುದೆಂದು ತೋರಿಸಿಕೊಟ್ಟ ಮೊದಲ ವಿಜ್ಞಾನಿ ಈಕೆ, ತನ್ನ ಈ ಸಂಶೋಧನೆಯನ್ನು ಆಕೆ ಯಾವುದೇ ಧನ ಸಹಾಯವಿಲ್ಲದೆ ಸಂಶೋಧನಾ ತಂಡವಿಲ್ಲದೆ, ಸಹಾಯಕರಿಲ್ಲದೆ ಸಂಪೂರ್ಣ ಸ್ವತಂತ್ರವಾಗಿ ನಡೆಸಿದ್ದಳು, 1970 ರಲ್ಲಿ ಬ್ರಿಸ್ಟಲ್ ವಿಶ್ವವಿದ್ಯಾನಿಲಯದ ಕುಲಪತಿಯಾದ ಈಕೆ, ಇದೀಗ ತನ್ನ 82ನೇ ವರ್ಷದಲ್ಲೂ ತುಂಬು ಚಟುವಟಿಕೆಯಿಂದ ಅಂತರ ರಾಷ್ಟ್ರೀಯ ಶಾಂತಿಗಾಗಿ ದುಡಿಯುತ್ತಿದ್ದಾಳೆ. 1963 ರಲ್ಲಿ ಮಾರಿಯಾ ಮೇಯರ್ ನ್ಯೂಕ್ಲಿಯರ್ ಕಣಗಳ ಕುರಿತಾದ ತನ್ನ ಸಂಶೋಧನೆಗೆ 'ಭೌತಶಾಸ್ತ್ರದ ನೋಬಲ್ ಪಾರಿತೋಷಿಕ ಪಡೆದಳು. ಮುಗ್ಗಟ್ಟಿನ ವರ್ಷಗಳಲ್ಲಿ ಮಾರಿಯಾ ಜಾನ್ಸ್ ಹಾಪ್‌ಕಿನ್ಸ್ ವಿಶ್ವವಿದ್ಯಾಲಯದಲ್ಲಿ ಸಂಬಳವಿಲ್ಲದೆಯೇ ಕೇವಲ ಭೌತಶಾಸ್ತ್ರದ ಖುಷಿ'ಗೆ ದುಡಿದಿದ್ದಳು. 1946ರಲ್ಲಿ ಶಿಕಾಗೋಗೆ ಹೋದ ಮಾರಿಯಾ 'ಇನ್‌ಸ್ಟಿಟ್ಯೂಟ್ ಆಫ್ ನ್ಯೂಕ್ಲಿಯರ್ ಸ್ಟಡೀಸ್'ನ ಭೌತಶಾಸ್ತ್ರ ವಿಭಾಗದಲ್ಲಿ ಪ್ರೊಫೆಸರ್ ಹುದ್ದೆ ಗಳಿಸಿದಳು. ಇಲ್ಲಿ ಆಕೆ ಹ್ಯಾನ್ಸ್ ಜೆನ್‌ಸನ್‌ನ ಭೇಟಿಯಾದಳು. ಅತನ ಜೊತೆಯಲ್ಲಿ ನ್ಯೂಕ್ಲಿಯರ್ ಕಣಗಳ ರಚನೆಯನ್ನು ಕಂಡುಹಿಡಿದಳು.

ಹೀಗೆ ಇತಿಹಾಸದಲ್ಲಿಳಿದು ವಿಜ್ಞಾನಕ್ಕೆ ಮಹಿಳೆಯರು ನೀಡಿರುವ ಕೊಡುಗೆಯನ್ನು ಹುಡುಕಿ ಹೊರಟರೆ ಮಹಿಳಾ ವಿಜ್ಞಾನಿಗಳ ದೊಡ್ಡ ಪಟ್ಟಿಯೇ ತಯಾರಾಗುತ್ತದೆ. ತಮ್ಮ ಕಾಲದ ಸಾಮಾಜಿಕ ಕಟ್ಟಲೆಯಲ್ಲೂ, ಅವಕಾಶಗಳಿಲ್ಲದ ಅನಾನುಕೂಲತೆಯಲ್ಲೂ, ಕಲಿಸುವವರಿಲ್ಲದ ಅಡತಡೆಯಲ್ಲೂ ವಿಜ್ಞಾನದತ್ತ ಆಕರ್ಷಿತರಾದ ಅಸಂಖ್ಯಾತ ಮಹಿಳೆಯರು ಅಜ್ಞಾತರಾಗಿಯೇ ಉಳಿದಿದ್ದಾರೆ. ಅವರನ್ನು ತಿಳಿವ ಯತ್ನ ಯಾವ ಮಹಿಳೆಗಾದರೂ ಆತ್ಮವಿಶ್ವಾಸ ನೀಡಬಲ್ಲದು – ವಿಜ್ಞಾನ, ತಂತ್ರ ಜ್ಞಾನದ ರಂಗಗಳಿಗೆ ನುಗ್ಗುವ ಆತ್ಮವಿಶ್ವಾಸ, ಆ ರಂಗದ ಸವಾಲುಗಳನ್ನೆಲ್ಲಾ ಎದುರಿಸಬಲ್ಲ ಆತ್ಮವಿಶ್ವಾಸ. ಸಮಾಜದ ಅಂಧಶ್ರದ್ಧೆಗಳ ವಿರುದ್ಧ ಹೋರಾಡಬಲ್ಲ ಆತ್ಮವಿಶ್ವಾಸ,

o o o

# ಗರ್ಭಪಾತ-ಐರ್ಲೆಂಡಿನಲ್ಲಿ ಇನ್ನೂ ಹಕ್ಕಿನಿಂದ ದೂರ

ಗೌರಿ

ಧಾರ್ಮಿಕ ಮತ್ತು ರಾಜಕೀಯ ಒತ್ತಡಗಳ ಮಧ್ಯೆ ಮಹಿಳಾ ಹಕ್ಕುಗಳಿಗಾಗಿ ನಡೆವ ಹೋರಾಟ ಐರ್ಲೆಂಡ್‌ನಲ್ಲಿ ಅಪರೂಪದ್ದೇನಲ್ಲ, ಅದೊಂದು ಸಹಜ ಕ್ರಿಯೆಯಾಗಿಬಿಟ್ಟಿದೆ. ನಾಗರೀಕ ಸಮಾಜದಲ್ಲಿ ಮೂಲಭೂತ ಹಕ್ಕೆಂದೆನಿಸಿಕೊಳ್ಳುವ ಗರ್ಭಪಾತದ ಹಕ್ಕು ಐರ್ಲೆಂಡ್ ಮಹಿಳೆಯರಿಗೆ ಇನ್ನೂ ಲಭ್ಯವಾಗದಿರುವುದು ಇತಿಹಾಸದ ವಿಪರ್ಯಾಸ ಎನ್ನಬಹುದು. ಗರ್ಭಪಾತ ಹಕ್ಕಿಗಾಗಿ ಒತ್ತಾಯಿಸಿ ನಡೆಯುವ ಪ್ರದರ್ಶನಗಳು ದಿನನಿತ್ಯದ ಪರಿಪಾಠವಾಗಿದೆ, ಇತ್ತೀಚಿನ ಕೆಲವು ಹೋರಾಟಗಳು ಹಾಗೂ ಕಾನೂನು ಒಡ್ಡಿದ ಸವಾಲುಗಳು ಗಮನಾರ್ಹವಾಗಿದೆ,

ಈ ವರ್ಷದ ಫೆಬ್ರುವರಿ ಮತ್ತು ಮಾರ್ಚ್ ತಿಂಗಳಲ್ಲಿ ಸ್ತ್ರೀ-ಪುರುಷರು ಐರ್ಲೆಂಡ್ ಬೀದಿಗಳಲ್ಲಿ ಬಿತ್ತಿಪತ್ರಗಳನ್ನು ಹಿಡಿದು, ಹದಿನಾಲ್ಕು ವರ್ಷದ ಬಾಲಕಿಗೆ ಗರ್ಭಪಾತ ಹಕ್ಕು ನೀಡಬೇಕೆಂದು ಒತ್ತಾಯಿಸಿದರು. ಘಟನೆ ನಡೆದು ಎರಡು ತಿಂಗಳಾದ ಮೇಲೆ ಈ ಬಾಲಕಿಯೂ ತನ್ನ ಮೇಲೆ ಅತ್ಯಾಚಾರ ನಡೆಯಿತೆಂದು ತನ್ನ ತಂದೆ-ತಾಯಿ ಬಳಿ ಹೇಳಿಕೊಂಡಳು. ನೆರೆಮನೆಯಲ್ಲಿಯೇ ವಾಸಿಸುವ, ತನ್ನ ಆಪ್ತ ಗೆಳೆಯನ ತಂದೆ ಅತ್ಯಾಚಾರ ಎಸಗಿದ ಎಂದು ಅವಳು ತಾಯಿ ಬಳಿ ಹೇಳಿದಳು. ಗರ್ಭಪಾತ ಮಾಡಿಸಿಕೊಳ್ಳಬೇಕೆಂಬ ಮತ್ತು ಮಿತ ಕುಟುಂಬಕ್ಕಾಗಿ ಅಗತ್ಯ ಸಾಧನ ಬಳಸಿಕೊಳ್ಳಬೇಕೆಂಬ ಮಹಿಳೆಯರ ಕೂಗನ್ನು ದಮನಗೊಳಿಸುವ ರೋಮನ್ ಕ್ಯಾಥೋಲಿಕ್ ಚರ್ಚ್‌ನ ಬಿಗಿ ಹಿಡಿತವನ್ನು ಚಳುವಳಿಗಾರರು ಪ್ರಶ್ನಿಸಿದರು. ಚರ್ಚ್, ಸರ್ಕಾರ ಮತ್ತು ಅತ್ಯಾಚಾರಿ ಈ ಮೂವರೂ ಮಹಿಳೆಯರ ಮೇಲೆ ಸಾಮೂಹಿಕ ಅತ್ಯಾಚಾರ ನಡೆಸುತ್ತಿದ್ದಾರೆಂದು ಒಂದು ಬಿತ್ತಿ ಪತ್ರದಲ್ಲಿ ಬರೆಯಲಾಗಿತ್ತು.

ಬೇಡದ ಮಗುವನ್ನು ಹೊರಲು ಮಹಿಳೆಯರ ಮೇಲೆ ಒತ್ತಡ ತರುವ ಪುರುಷ ಪ್ರಧಾನ ಸಂಸ್ಥೆಗಳ ವಿರುದ್ಧ ಚಳುವಳಿಗಾರರು ಘೋಷಣೆ ಕೂಗಿದರು. ಅತ್ಯಾಚಾರಿಗಳ ಕೈಯಲ್ಲಿ ನಾವು (ಮಕ್ಕಳನ್ನು)ಹುಟ್ಟಿಸುವ ಯಂತ್ರಗಳಾಗಿದ್ದೇವೆ' ಎಂದು ಒಬ್ಬಳು ಹೇಳಿದಳು. ಇದಕ್ಕೆ ಹಿನ್ನಲೆ ಉಂಟು. ಫೆಬ್ರುವರಿ 17ರ ಕೋರ್ಟ್ ತೀರ್ಪೊಂದಕ್ಕೆ ಅದು ಪ್ರತಿಕ್ರಿಯೆಯಾಗಿತ್ತು. ಅತ್ಯಾಚಾರಕ್ಕೆ ತುತ್ತಾಗಿದ್ದ ಹದಿಹರೆಯೊಬ್ಬಳು ಗರ್ಭಪಾತ ಮಾಡಿಸಿಕೊಳ್ಳಲು ಇಂಗ್ಲೆಂಡಿಗೆ ಹೋಗಬಯಸಿದಳು, ಆದರೆ ಐರ್ಲೆಂಡ್ ಕೋರ್ಟಿನಲ್ಲಿ ನ್ಯಾಯಮೂರ್ತಿ ದುಲನ್ ಕಾಸ್ಟಲೀನೋ ಅವರು ಆಕೆಗೆ ತಡೆಹಾಕಿ ರೂಲಿಂಗ್ ನೀಡಿದರು. 1983ರಲ್ಲಿ ಗರ್ಭಪಾತ ವಿರೋಧ ಕಾಯ್ದೆಯನ್ನು ಸರ್ಕಾರವು ಇನ್ನಷ್ಟು ಬಿಗಿಗೊಳಿಸಿತು. ಗರ್ಭದಿಂದ ಮಹಿಳೆಯ ಜೀವಕ್ಕೆ ಅಪಾಯವೆಂಬುದು ದೃಢಪಟ್ಟರೆ ಮಾತ್ರ ಅದಕ್ಕೆ ಒಪ್ಪಿಗೆ ನೀಡಬಹುದೆಂಬುದು ಸರ್ಕಾರದ ನಿಲುವು. ಈ ಬಾಲಕಿಯ

ಆತ್ಮಹತ್ಯೆ ಬೆದರಿಕೆ ಕೂಡ ಕೋರ್ಟ್ ಮನವನ್ನು ಕರಗಿಸಲಿಲ್ಲ. ಇದರಿಂದ ಕುಪಿತಗೊಂಡ ಜನರು ಬೀದಿಯಲ್ಲಿ ಪ್ರತಿಭಟನೆ ವ್ಯಕ್ತಪಡಿಸಿದರು. ಜನರ ಕೋಪ ಹಾಗೂ ಯುರೋಪ್ ಸಮುದಾಯದ ಒತ್ತಡದಿಂದ ಸುಪ್ರಿಂ ಕೋರ್ಟ್ ಈ ವಿಷಯ ಕುರಿತ ತೀರ್ಪನ್ನು ಬದಲಿಸಿತು. ಅನಂತರ ಬಾಲಕಿ ಮತ್ತು ಅವಳ ಪೋಷಕರು ಮಾರ್ಚ್‌ನಲ್ಲಿ ಇಂಗ್ಲೆಂಡ್‌ಗೆ ಹೋದರು.

ಮ್ಯಾಗ್ಲಿನ್ ಬ್ರಾಂಡಿ ಎಂಬ ಹೋರಾಟಗಾರ್ತಿ ಗರ್ಭಪಾತ ಕುರಿತ ಮಾಹಿತಿ ಪ್ರಕಟಿಸಿ ವಿತರಿಸಿದ ಆರೋಪಕ್ಕಾಗಿ ಮಾನವನ ಹಕ್ಕು ಕುರಿತ ಯುರೋಪ್ ಕೋರ್ಟ್ ಮುಂದೆ ಹಾಜರಾಗಬೇಕಾಯಿತು. ಇನ್ನೂ ಹುಟ್ಟದ ಮಗುವಿನ ರಕ್ಷಣಾ ಸಂಸ್ಥೆಯೊಂದು ಕೋರ್ಟಿಗೆ ದೂರು ಸಲ್ಲಿಸಿತ್ತು.

ಗರ್ಭಪಾತ ಕುರಿತ ಮಾಹಿತಿ ಪ್ರಸರಣಕ್ಕೆ ಅಡ್ಡಿ ಮುಂದುವರಿದೇ ಇದೆ. ಆದರೂ ಪ್ರತಿ ವರ್ಷ ಸುಮಾರು 7000 ಐರಿಷ್ ಮಹಿಳೆಯರು ಗರ್ಭಪಾತಕ್ಕೆಂದು ಬ್ರಿಟನ್ನಿಗೆ ಹೋಗುತ್ತಾರೆ.

ಕಳೆದ ಫೆಬ್ರುವರಿ – ಮಾರ್ಚ್‌ನಲ್ಲಿ ನಡೆದ ಪ್ರತಿಭಟನೆಗೆ ಸಂಬಂಧಿಸಿದ 14 ವರ್ಷದ ಬಾಲಕಿಯ ಅತ್ಯಾಚಾರ ಮತ್ತು ಗರ್ಭಪಾತಕ್ಕೆ ಅನುಮತಿ ಕೋರಿದ ಪ್ರಕರಣ ಕೂಡಾ ಐರಿಷ್ ಸರ್ಕಾರದ ನೀತಿಗೆ ಕೈಗನ್ನಡಿಯಾಗಿದೆ. ಇಂಗ್ಲೆಂಡಿಗೆ ಬಾಲಕಿಯನ್ನು ಕರೆದೊಯ್ಯಲಾಗಿತ್ತು. ಅತ್ಯಾಚಾರಿಯ ಗುರುತು ಪತ್ತೆಗಾಗಿ ಭ್ರೂಣದ ಅಂಗಾಂಶವನ್ನು ಪರೀಕ್ಷೆಗೆ ಬಳಸಲು ಬಾಲಕಿಯ ತಂದೆ ಐರಿಷ್ ಪೋಲೀಸರಿಗೆ ಲಂಡನ್‌ನಿಂದ ತಿಳಿಸಿದಾಗ ಸರ್ಕಾರ ಎಚ್ಚೆತ್ತುಕೊಂಡಿತು. ಮುಂದಿನ ಒಂಬತ್ತು ತಿಂಗಳು ದೇಶದಲ್ಲೇ ಇರಲು ಬಾಲಕಿಯನ್ನು ವಾಪಸ್ ತರಲು ಕೋರ್ಟ್ ಮೂಲಕ ಆದೇಶಿಸಲಾಯಿತು.

ಯುರೋಪ್ ಸಮುದಾಯವು ವೈದ್ಯಕೀಯ ಗರ್ಭಪಾತಕ್ಕೆ ಅನುಮತಿ ನೀಡುವ ಕಾನೂನು ಮಾಡಿದೆ. ಆದರೆ ಕಳೆದ ಡಿಸೆಂಬರ್‌ನ ಮಾಸ್ಟ್ರಿಟ್ ಒಪ್ಪಂದವು ಇದರಿಂದ ಐರ್ಲೆಂಡ್‌ನ್ನು ಹೊರತು ಪಡಿಸುವ ಅವಕಾಶ ಒದಗಿಸುತ್ತದೆ. ಬರುವ ಜೂನ್‌ನಲ್ಲಿ ಈ ಒಪ್ಪಂದವು ಜನಮತಕ್ಕೆ ಬರಲಿದೆ. ಈಗಂತೂ ಗೊಂದಲವಿದೆ. ಐರ್ಲೆಂಡಿನ ಗರ್ಭಪಾತ ವಿರೋಧ ಕಾನೂನುಗಳಿಗೆ ಸಾಕಷ್ಟು ಅಸಮಾಧಾನವಿದೆ. ಇಂಥ ಒಪ್ಪಂದಕ್ಕೆ ಬೆಂಬಲ ನೀಡಿದರೆ ಐರಿಷ್ ಮಹಿಳೆಯರ ಮೇಲ್ಮನವಿಗೆ ತಡೆ ಒಡ್ಡಿದಂತಾಗುತ್ತದೆ. ಈಗ ಮಾನವನ ಹಕ್ಕು ಕುರಿತ ಯುರೋಪ್ ಸಮುದಾಯಕ್ಕೆ ಅಪೀಲು ಹೋಗುವ ಅವಕಾಶವಿದೆ. ಸರ್ಕಾರವಂತೂ ಮಹಿಳೆಯರ ಪರವಾಗಿಲ್ಲ, ಜನರೇ ಎಚ್ಚೆತ್ತುಕೊಳ್ಳಬೇಕಾಗಿದೆ. 'ತೊಟ್ಟಿಲು ತೂಗುವ ಕೈ ವ್ಯವಸ್ಥೆಯನ್ನೂ ಅಲ್ಲಾಡಿಸಬಹುದು' ಎಂಬ ಐರ್ಲೆಂಡಿನ ಮೊದಲ ಮಹಿಳಾ ಅಧ್ಯಕ್ಷೆ ಮೇರಿ ರಾಬನ್‌ಸನ್ ಹೇಳಿದ್ದ 1990ರ ಮಾತು ಇಂದಿಗೂ ಅನ್ವಯಿಸುತ್ತದೆ. ಬಹುಶಃ ಐರಿಷ್ ಜನರು ಜನಮತ ಸಮಯದಲ್ಲಿ ಅದನ್ನು ನೆನಪಿನಲ್ಲಿಟ್ಟುಕೊಳ್ಳಬಹುದು.



# ಮಗುವಿನ ಲಿಂಗ ಪತ್ತೆ ತಂತ್ರಜ್ಞಾನ ಮಸೂದೆ

ಬಹು ದೀರ್ಘ ಕಾಲದಿಂದ ನಿರೀಕ್ಷಿಸುತ್ತಿದ್ದ ಮಗುವಿನ ಲಿಂಗ ಪತ್ತೆ ತಂತ್ರಜ್ಞಾನ (ದುರುಪಯೋಗದ ನಿಯಂತ್ರಣ ಮತ್ತು ತಡೆ) ಮಸೂದೆ(1991) ಯ ರೂಪರೇಷೆ ಅಂತಿಮವಾಗಿ ಸಿದ್ಧವಾಗಿದೆ, ರಾಷ್ಟ್ರದಲ್ಲಿ ಲಿಂಗ ಪತ್ತೆ ಹಚ್ಚುವ ಪರೀಕ್ಷೆಗಳನ್ನು ನಿಷೇಧಿಸುವ ಈ ಮಸೂದೆ ವಿವಿಧ ಮಟ್ಟದಲ್ಲಿ ಚರ್ಚೆಗೆ ಒಳಗಾಗಿದೆ.

ಮಸೂದೆ ಈ ಹಂತಕ್ಕೆ ಬರಲು ಸರ್ಕಾರಕ್ಕೆ ಸುಮಾರು 15 ವರ್ಷಗಳೇ ಬೇಕಾಯಿತೆಂಬ ವಾಸ್ತವಾಂಶವು ಈ ದಿಸೆಯಲ್ಲಿನ ಗಂಭೀರತೆಯನ್ನು ಸೂಚಿಸುತ್ತದೆ.

ನಾಲ್ಕು ವರ್ಷಗಳಲ್ಲಿ ಮಹಾರಾಷ್ಟ್ರ ಕಾಯಿದೆಯ ಅನುಭವದ ಹಿನ್ನಲೆಯಲ್ಲಿ ಗಮನಿಸಿದಾಗ ಈ ಆತಂಕ ವ್ಯಕ್ತವಾಗುತ್ತದೆ, ಇಲ್ಲಿ ಹಲವು ಮುಖ್ಯ ಸಮಸ್ಯೆಗಳನ್ನು ಪರಿಶೀಲಿಸಲಾಗಿದೆ.

ಮಸೂದೆಯ ಪರಿಚ್ಛೇದ 3 (1) ರ ಪ್ರಕಾರ "ಈ ಕಾಯಿದೆಯ ನೊಂದಣಿಯಾಗದ ಯಾವುದೇ ವಂಶವಾಹಿ ಸಲಹಾ ಕೇಂದ್ರ (ಜೆನೆಟಿಕ್ ಸಲಹಾ ಕೇಂದ್ರ) ಅಥವಾ ವಂಶವಾಹಿ ಪ್ರಯೋಗಾಲಯ ಜೆನೆಟಿಕ್ ಪ್ರಯೋಗಾಲಯ ಅಥವಾ ವಂಶವಾಹಿ ಕ್ಲಿನಿಕ್‌ಗಳು (ಜೆನೆಟಿಕ್ ಕ್ಲಿನಿಕ್) ಜನನ ಪೂರ್ವ ಲಿಂಗ ಪತ್ತೆಗೆ ಸಂಭಂಧಿಸಿದ ಚಟುವಟಿಕೆ ನಡೆಸಬಾರದು ಅಥವಾ

—ಡಾ. ಅಮಿತ್ ಸೇನ್ ಗುಪ್ತ

ಕನ್ನಡಕ್ಕೆ—ಲತ

ಮಹಾರಾಷ್ಟ್ರ ವಿಧಾನ ಸಭೆಯಲ್ಲಿ 1988ರಲ್ಲಿ ಇದೇ ರೀತಿಯ ಮಸೂದೆಯೊಂದು ಅಂಗೀಕಾರವಾದ ನಾಲ್ಕು ವರ್ಷಗಳ ತರುವಾಯ ಈ ಮಸೂದೆ ಸಿದ್ಧವಾಗಿದೆ.

ಉದ್ದೇಶಿತ ಮಸೂದೆಯನ್ನು ಸೂಕ್ಷ್ಮವಾಗಿ ಪರಾಮರ್ಶಿಸಿದಾಗ ಇದು ಲಿಂಗ ಪತ್ತೆ ಹಚ್ಚುವ ಪರೀಕ್ಷೆಯ ಪಿಡುಗನ್ನು ತಡೆಯುವಲ್ಲಿ ಎಷ್ಟರ ಮಟ್ಟಿಗೆ ಪರಿಣಾಮಕಾರಿಯಾದೀತು ಎಂಬ ಪ್ರಶ್ನೆ ಉದ್ಭವಿಸುತ್ತದೆ, ಕಳೆದ

ಇದಕ್ಕೆ ಸಹಾಯ ಮಾಡಬಾರದು."

ಈ ಮೇಲಿನ ಹೇಳಿಕೆಯು ವಂಶವಾಹಿ ಕೇಂದ್ರಗಳು ಅವಶ್ಯಕ ಮತ್ತು ನೊಂದಣಿ ಪಡೆದಲ್ಲಿ ಖಾಸಗಿಯಾಗಿ (ಸರ್ಕಾರಿ ಸಂಸ್ಥೆ ಹೊರಗಡೆ) ಇದರ ಸ್ಥಾಪನೆಗೆ ಅವಕಾಶ ನೀಡಬಹುದು ಎಂಬುದನ್ನು ಸ್ಪಷ್ಟವಾಗಿ ಸೂಚಿಸುತ್ತದೆ. ಭ್ರೂಣದಲ್ಲಿ ವಂಶವಾಹಿಯ ವೈಪರೀತ್ಯಗಳನ್ನು ಪರೀಕ್ಷಿಸಲು ವಂಶವಾಹಿ ಪ್ರಯೋಗಾಲಯಗಳು ಅಗತ್ಯವೆಂದು ಹೇಳಬಹುದು. ಆದರೆ ಇಂದು ರಾಷ್ಟ್ರದಲ್ಲಿನ ಯಾವುದೇ

ವಂಶವಾಹಿ ಖಾಸಗಿ ಕೇಂದ್ರಗಳು ಅಕ್ಷರಶಃ ಈ ಕಾರ್ಯವನ್ನು ಮಾಡುತ್ತಿಲ್ಲ, ಬದಲು ಲಿಂಗ ಪತ್ತೆ ಪರೀಕ್ಷೆಗಳಲ್ಲಿ ನಿರತವಾಗಿವೆ.

ಇಷ್ಟಲ್ಲದೆ ತೀರಾ ಅಪರೂಪದ ಪ್ರಕರಣಗಳಲ್ಲಿ ಮಾತ್ರ ವಂಶವಾಹಿಯ ಪರೀಕ್ಷೆ ಅವಶ್ಯವಾಗುತ್ತದೆ. ಇದಕ್ಕೆ ಸರ್ಕಾರಿ ಕೇಂದ್ರಗಳಲ್ಲಿರುವ ಸೌಲಭ್ಯಗಳೇ ಸಾಕು. ಇಂತಹ ಪರಿಸ್ಥಿತಿಯಲ್ಲಿ ಸರ್ಕಾರಿ ಕೇಂದ್ರಗಳ ಹೊರಗೆ ವಂಶವಾಹಿಯ ಪ್ರಯೋಗಾಲಯಗಳಿಗೆ ಅವಕಾಶ ಮಾಡಿ ಕೊಡುವ ಔಚಿತ್ಯ ಪ್ರಶ್ನಾರ್ಹವಾಗುತ್ತದೆ. ಸಂಪೂರ್ಣ ನಿಷೇಧದ ಬದಲು ಇದರ ನಿಯಂತ್ರಣದ ಬಗ್ಗೆ ಮಾತ್ರ ಮಾತನಾಡುತ್ತಾ ಹೋದರೆ ಇಂತಹ ಕೇಂದ್ರಗಳ ದುರ್ಬಳಕೆಯ ಸಾಧ್ಯತೆಯೂ ಹಾಗೆಯೇ ಉಳಿದಿರುತ್ತದೆ.

"ಯಾವುದೇ ವಂಶವಾಹಿ ಸಲಹಾ ಕೇಂದ್ರ, ವಂಶವಾಹಿ ಪ್ರಯೋಗಾಲಯ ಅಥವಾ ವಂಶವಾಹಿ ಕ್ಲಿನಿಕ್‌ಗಳು ಭ್ರೂಣದ ಲಿಂಗ ಪತ್ತೆ ಉದ್ದೇಶಕ್ಕಾಗಿ ಅಲ್ಟ್ರಾಸೋನೋಗ್ರಫಿಯನ್ನೊಳಗೊಂಡಂತೆ ಜನನ ಪೂರ್ವ ಲಿಂಗ ಪತ್ತೆಯ ತಂತ್ರಜ್ಞಾನಗಳನ್ನು ಬಳಸಬಾರದು ಅಥವಾ ಪರೀಕ್ಷೆಗೊಳಪಡುವಂತೆ ಉತ್ತೇಜಿಸಬಾರದು." [ಪರಿಚ್ಛೇದ 6 (a)]

ಇಂತಹ ಕೇಂದ್ರಗಳ ನಿಯಂತ್ರಣದ ಪ್ರಶ್ನೆಗೆ ಸಂಬಂಧಿಸಿದಂತೆ ಕೂಡ ಮಸೂದೆ ಹೇಳುತ್ತದೆ. "ವಂಶವಾಹಿ ಸಲಹಾ ಕೇಂದ್ರ, ವಂಶವಾಹಿ ಪ್ರಯೋಗಾಲಯ ಅಥವಾ ವಂಶವಾಹಿ ಕ್ಲಿನಿಕ್‌ಗಳು, ನೊಂದಣಿಗಾಗಿ ಅರ್ಜಿ ಸಲ್ಲಿಸದೆ, ಅಥವಾ ನೊಂದಣಿ ಪಡೆಯಲು ಭಾಗಶವಾಗಿ ಅಥವಾ ಸಂಪೂರ್ಣವಾಗಿ ಜನನ ಪೂರ್ವ ಲಿಂಗ ಪತ್ತೆ ತಂತ್ರಜ್ಞಾನ ಬಳಸುತ್ತಿದ್ದರೆ ಕಾಯಿದೆ ಜಾರಿಗೆ ಬಂದ ದಿನದಿಂದ ಆರು ತಿಂಗಳ ಅವಧಿಯೊಳಗೆ ಇಂತಹ ಯಾವುದೇ ಕಾರ್ಯ ನಡೆಸುವುದನ್ನು ನಿಲ್ಲಿಸಬೇಕು." (ಪರಿಚ್ಛೇಧ 18 (4)).

ಲಿಂಗ ಪತ್ತೆಗಾಗಿ ಅಲ್ಟ್ರಾಸೋನೋಗ್ರಫಿ ಬಳಕೆಯ ಸಾಧ್ಯತೆಯನ್ನು ಮಸೂದೆ ಗುರುತಿಸುವುದರಿಂದ ಮೇಲಿನ ಎರಡು ಹೇಳಿಕೆಗಳಲ್ಲಿ ದ್ವಂದ್ವ ಕಂಡು ಬರುತ್ತದೆ. ಅಲ್ಲದೆ ಲಿಂಗ ಪತ್ತೆಗಾಗಿ ಅಲ್ಟ್ರಾಸೋನೋಗ್ರಫಿ ಬಳಕೆಯನ್ನು ನಿಯಂತ್ರಿಸುವ ಯಾವ ವಿಧಾನಗಳನ್ನು ಮಸೂದೆ ಹೇಳಿಲ್ಲ.

ವಾಸ್ತವವಾಗಿ ಇಂದು ರಾಷ್ಟ್ರದ ಬಹುತೇಕ ಭಾಗಗಳಲ್ಲಿ ಲಿಂಗ ಪತ್ತೆಗಾಗಿ ಮಾಡಲಾಗುವ ಅಮ್ನಿಯೋಸಿಂಥಿಸಿಸ್ ಸ್ಥಾನವನ್ನು ಅಲ್ಟ್ರಾಸೋನೋಗ್ರಫಿ ಆಕ್ರಮಿಸಿದೆ.

ಅಲ್ಟ್ರಾಸೋನೋಗ್ರಫಿಯನ್ನು ಹಲವಾರು ಪರಿಸ್ಥಿತಿಗಳಲ್ಲಿ ಬಳಸಲಾಗುತ್ತದೆ. ಇದಕ್ಕೂ ಗರ್ಭಧಾರಣೆ ವಿಷಯಕ್ಕೂ ಸಂಬಂಧವಿರುವುದಿಲ್ಲವೆಂದು ಹೇಳಬಹುದು, ಗರ್ಭಧರಿಸಿರುವ ವೇಳೆಯಲ್ಲಿ ಭ್ರೂಣದ ಬೆಳವಣಿಗೆಯನ್ನು ಆಗಾಗ್ಗೆ ಪರೀಕ್ಷಿಸಿಕೊಳ್ಳುವಂತೆ ಸೂಚಿಸಲಾಗುತ್ತದೆ ಇಲ್ಲೂ ಕೂಡಾ ಭ್ರೂಣದ ಲಿಂಗ ಪತ್ತೆಗೂ ಸಂಬಂಧವಿರುವುದಿಲ್ಲ. ಹೀಗೆ ಕ್ಲಿನಿಕ್‌ಗಳು ನಡೆಸುವ ಅಲ್ಟ್ರಾಸೋನೋಗ್ರಫಿ ಬಹು ವ್ಯಾಪಕವಾಗಿದೆ. ಅಲ್ಲದೆ ಇವು ಲಿಂಗ ಪತ್ತೆಗಾಗಿಯೇ ಪ್ರಯೋಗಾಲಯಗಳು ನಡೆಸುವ 'ಅಮ್ನಿಯೋ ಸಿಂಥೆಸಿಸ್'ನಂತೆ ಇರುವುದಿಲ್ಲ.

ವಾಸ್ತವವಾಗಿ ಈಗ ಲಿಂಗ ಪತ್ತೆಗೆಂದು ಅಲ್ಟ್ರಾಸೋನೋಗ್ರಫಿ ತಂತ್ರವನ್ನು ಬಹಳ ವ್ಯಾಪಕವಾಗಿ ಬಳಸುತ್ತಿದ್ದರೂ ಹೆಚ್ಚು ಜನರು ಈ ಪರೀಕ್ಷೆಗೆ ಒಳಗಾಗುತ್ತಿಲ್ಲ. ವಂಶವಾಹಿ ಕೇಂದ್ರಗಳಲ್ಲಿ ಬಳಸಲಾಗುವ ತಂತ್ರಕ್ಕಿಂತ ಭಿನ್ನವಾದದ್ದನ್ನು ಅಲ್ಟ್ರಾಸೋನೋಗ್ರಫಿ ಪ್ರಯೋಗಾಲಯಗಳಿಗಾಗಿ ರೂಪಿಸಬೇಕಿದೆ. ದುರದೃಷ್ಟವಶಾತ್ ಮಸೂದೆ ಈ ಬಗ್ಗೆ ಸಂಪೂರ್ಣ 'ಮೌನ' ತಾಳಿಬಿಟ್ಟಿದೆ.

ಉದ್ದೇಶಿತ ಕಾಯಿದೆಯ ಜಾರಿಯ ಕುರಿತಂತೆ ಹೇಳುತ್ತಾ, ಮಸೂದೆಯು ಸೂಕ್ತ ಪ್ರಾಧಿಕಾರ, ಈ

ಪ್ರಾಧಿಕಾರದ ನೇಮಕ ಮತ್ತು ಅಧಿಕಾರವನ್ನು ಈ ಕೆಳಕಂಡಂತೆ ವಿವರಿಸುತ್ತದೆ,

"ಕಾಯಿದೆಯ ಉದ್ದೇಶಕ್ಕಾಗಿ ಕೇಂದ್ರಸರ್ಕಾರ ಅಧಿಕೃತ ಗೆಜೆಟ್‌ನಲ್ಲಿ ಸೂಚನೆ ಹೊರಡಿಸುವ ಮೂಲಕ ಒಬ್ಬರು ಅಥವಾ ಇಬ್ಬರಿಗಿಂತ ಹೆಚ್ಚು ಅಧಿಕಾರಿಗಳನ್ನು ಪ್ರತಿ ಕೇಂದ್ರಾಡಳಿತ ಪ್ರದೇಶಕ್ಕೆ ಪ್ರಾಧಿಕಾರಿಯಾಗಿ ನೇಮಿಸಬೇಕು, ಮತ್ತು ರಾಜ್ಯ ಸರ್ಕಾರ ಅಧಿಕೃತ ಗೆಜೆಟ್‌ನಲ್ಲಿ ಸೂಚನೆಯ ಮೂಲಕ ಒಬ್ಬರು ಅಥವಾ ಹೆಚ್ಚಿನ ಅಧಿಕಾರಿಗಳನ್ನು ಪ್ರಾಧಿಕಾರಿಯಾಗಿ ನೇಮಿಸಬೇಕು,". (ಪರಿಚ್ಛೇದ 17 (1) ಮತ್ತು [2].)

ಪತ್ತೆ ಈ ಪ್ರಾಧಿಕಾರ ಈ "ನೊಂದಣಿ ನೀಡುವ, ನೊಂದಣಿ ರದ್ದು ಅಥವಾ ವಜಾ ಮಾಡುವ ಮತ್ತು ಈ ಕಾಯಿದೆ ಉಲ್ಲಂಘನೆಯ ದೂರುಗಳ ಬಗ್ಗೆ ತನಿಖೆ ನಡೆಸುವ ಕಾರ್ಯಗಳನ್ನು ನಿರ್ವಹಿಸುತ್ತದೆ." ಪರಿಚ್ಛೇದ 17 (4). ಕಾಯಿದೆಯ ಸಲಹಾ ಸಮಿತಿ ಕುರಿತಂತೆ ಮಸೂದೆ ಹೇಳುತ್ತದೆ, ಆದರೆ ಅದರ ನೇಮಕ ಮತ್ತು ಅಧಿಕಾರಿಗಳ ಬಗ್ಗೆ ಸ್ಪಷ್ಟವಾಗಿ ತಿಳಿಸಿಲ್ಲ.

ಮತ್ತೊಂದು ರೀತಿಯಲ್ಲಿ ಹೇಳುವುದಾದರೆ, ಉದ್ದೇಶಿತ ಕಾಯಿದೆಯನ್ನು ಜಾರಿಗೊಳಿಸುವ ಒಟ್ಟು ಹೊಣೆಗಾರಿಕೆಯನ್ನು ಪ್ರತಿ ರಾಜ್ಯದಲ್ಲಿ ಸರ್ಕಾರ ನೇಮಿಸುವ ಇಬ್ಬರು ಅಧಿಕಾರಿಗಳಿಗೆ ವಹಿಸಿಕೊಡಲಾಗುತ್ತದೆ. ವಿವಿಧ ಕ್ಷೇತದಲ್ಲಿ ಕಾಯಿದೆ ಜಾರಿಗೊಳಿಸುವ ಸರ್ಕಾರದ ವಿಳಂಬ ಕ್ರಮವನ್ನು ಗಮನಿಸಿದಾಗ ಇವರ ಬಗ್ಗೆಯೂ ವಿಶ್ವಾಸ ಮೂಡುವುದಿಲ್ಲ, ಮಹಾರಾಷ್ಟ್ರ ಕಾಯಿದೆ ಕೂಡ ನಿರ್ಧಾರ ಕೈಗೊಳ್ಳುವ ಅವಕಾಶವನ್ನು ಇಬ್ಬರು ಅಧಿಕಾರಿಗಳಿಗೆ ಬಿಟ್ಟುಕೊಡಲಿಲ್ಲವೆಂಬುದನ್ನು ಇಲ್ಲಿ ಉದಾಹರಿಸಬಹುದು. ವಾಸ್ತವವಾಗಿ ಮಹಾರಾಷ್ಟ್ರದಲ್ಲಿ ಕಾಯಿದೆಯ ಜಾರಿ ಕುರಿತ ಪ್ರಮುಖ ಕೆಲಸಗಳನ್ನು ಸರ್ಕಾರದಿಂದ ನೇಮಕಗೊಳ್ಳದ ಇತರ ಸದಸ್ಯರೇ ನಿರ್ವಹಿಸಿದರು !

ಉದ್ದೇಶಿತ ಕಾಯಿದೆಯ ಉಲ್ಲಂಘನೆಗಾಗಿ ಮಸೂದೆಯಲ್ಲಿ ನಿಗದಿಪಡಿಸಲಾಗಿರುವ ಶಿಕ್ಷೆ ಎಂದರೆ : "ಮೂರು ವರ್ಷಗಳ ಅವಧಿವರೆಗೆ ವಿಸ್ತರಿಸಬಹುದಾದ ಸೆರೆವಾಸ ಮತ್ತು ರೂ. 10 ಸಾವಿರದವರೆಗೆ ವಿಸ್ತರಿಸಬಹುದಾದ ದಂಡ," (ಪರಿಚ್ಛೇದ 23 ರಿಂದ 26)

ಮಸೂದೆಯಲ್ಲಿ ಎಲ್ಲೂ ಕನಿಷ್ಠ ಶಿಕ್ಷೆಯನ್ನು ಸೂಚಿಸಲಾಗಿಲ್ಲ. ಲಿಂಗ ಪತ್ತೆ ಪರೀಕ್ಷೆ ನಡೆಸುವ ವೈದ್ಯರು, ವಂಶವಾಹಿ ಕೇಂದ್ರಗಳ ನೌಕರರು ಮತ್ತು ಇಂತಹ ಕೇಂದ್ರಗಳ ನೆರವು ಕೋರುವವರಿಗೆ ಎಲ್ಲರಿಗೂ ಒಂದೇ ರೀತಿಯ ಶಿಕ್ಷೆ ವಿಧಿಸಬೇಕೆಂದು ಮಸೂದೆ ಹೇಳುತ್ತದೆ, ಇದು ಉಚಿತವಾದುದಲ್ಲ.

ಏಕೆಂದರೆ ವಾಸ್ತವವಾಗಿ ಲಿಂಗ ಪತ್ತೆಯ ಪರೀಕ್ಷೆಯನ್ನು ರೂಢಿಗೊಳಿಸುವವರು ವೈದ್ಯರು, ಇಂತಹವರಿಗೆ ಹೆಚ್ಚು ಕಠಿಣ ಶಿಕ್ಷೆಯನ್ನು ವಿಧಿಸಬೇಕು. ಆದರೆ ಈಗ ಆಗಿರುವುದೇನೆಂದರೆ ಪ್ರಭಾವಶಾಲಿಗಳಾಗಿರುವ ವೈದ್ಯರು ಶಿಕ್ಷೆಯಿಂದ ತಪ್ಪಿಸಿಕೊಳ್ಳುತ್ತಾರೆ. ಕೇಂದ್ರದ ಇತರ ನೌಕರರು ಶಿಕ್ಷೆಗೆ ಗುರಿಯಾಗುತ್ತಾರೆ.

ಮಸೂದೆಯ ಪರಿಚ್ಛೇದ 23(3) ಹೀಗೆ ತಿಳಿಸುತ್ತದೆ. "ಗರ್ಭಧರಿಸಿದ ಮಹಿಳೆಯನ್ನು ಲಿಂಗ ಪತ್ತೆ ಪರೀಕ್ಷೆಗೊಳಪಡಿಸಬೇಕೆಂದು ವಂಶವಾಹಿ ಸಲಹಾ ಕೇಂದ್ರ ಅಥವಾ ಪ್ರಯೋಗಾಲಯ ಅಥವಾ ಕ್ಲಿನಿಕ್‌ಗಳನ್ನು ಅಥವಾ ಸ್ತ್ರೀ ತಜ್ಞರನ್ನು ಕೋರುವ ಯಾವನೇ ವ್ಯಕ್ತಿಯನ್ನು ಶಿಕ್ಷಿಸಬೇಕು."

ಲಿಂಗ ಪತ್ತೆಯ ಪರೀಕ್ಷೆ ಅನಿವಾರ್ಯವಲ್ಲದಿದ್ದರೆ ಮಹಿಳೆಯೂ ಶಿಕ್ಷೆಗೆ ಒಳಪಡುತ್ತಾಳೆ ಎಂದು ಮಸೂದೆ ಹೇಳುತ್ತದೆ,

ಲಿಂಗ ಪತ್ತೆ ಪರೀಕ್ಷೆಯ ಜಾಲಕ್ಕೆ ಬಲಿಯಾದವಳೆಂದು ಪರಿಗಣಿಸಬೇಕಾದ ಮತ್ತು ಈ ಅಪರಾಧದಲ್ಲಿ ತೊಡಗುವವರೊಂದಿಗೆ ಭಾಗಿಯಾಗಿರದ ಮಹಿಳೆಯನ್ನು 'ಶಿಕ್ಷಿಸ'ಬೇಕೆಂದು ಮಸೂದೆ ಹೇಳಿರುವುದನ್ನು ಒಪ್ಪಲಾಗುವುದಿಲ್ಲ.

ವೈದ್ಯರಿಗೆ ನೀಡಲಾಗುವ ಶಿಕ್ಷೆಗೆ (ಸೆರೆಮಾಸ ಮತ್ತು ದಂಡದೊಂದಿಗೆ) ಸಂಬಂಧಿಸಿದಂತೆ ಮಸೂದೆಯು 'ತಪ್ಪಿತಸ್ಥರೆಂದು ಖಾತರಿಯಾಗಿರುವ ನೊಂದಣಿ ಪಡೆದ ವೈದ್ಯರ ಹೆಸರನ್ನು ಪ್ರಾಧಿಕಾರವು ಸಂಬಂಧಿಸಿದ ರಾಜ್ಯ ವೈದ್ಯಕೀಯ ಮಂಡಳಿಗೆ ತಿಳಿಸಬಹುದು ಮತ್ತು ಎರಡು ವರ್ಷಗಳ ವರೆಗೆ ಅವರ ಹೆಸರನ್ನು ಮಂಡಳಿಯ ನೊಂದಣಿ ಪಟ್ಟಿಯಿಂದ ತೆಗೆದು ಹಾಕುವಂತೆ ಹಾಗೂ ವೈದ್ಯರು ಒಂದಕ್ಕಿಂತ ಹೆಚ್ಚು ಬಾರಿ ಈ ಅಪರಾಧದಲ್ಲಿ ತೊಡಗಿದರೆ ಶಾಶ್ವತವಾಗಿ ಅವರ ಹೆಸರನ್ನು ತೆಗೆದು ಹಾಕುವಂತೆ ಸೂಚಿಸಬಹುದು"–ಪರಿಚ್ಛೇದ 23 (2).

ಇದು ಮಸೂದೆಯಲ್ಲಿರುವ ಪ್ರಮುಖ ಲೋಪವಾಗಿದೆ. ಮೇಲೆ ತಿಳಿಸಲಾಗಿರುವ ಪರಿಚ್ಛೇಧದ ಪ್ರಕಾರ ತಪ್ಪಿತಸ್ಥ ವೈದ್ಯರ ನೊಂದಣಿ ರದ್ದತಿಗೆ ಸಂಬಂಧಿಸಿದಂತೆ ಪ್ರಾಧಿಕಾರಕ್ಕೆ ಯಾವುದೇ ಸ್ವಾಯತ್ತ ಅಧಿಕಾರವಿರುವುದಿಲ್ಲ. ಪ್ರಾಧಿಕಾರವು ಕೇವಲ ವೈದ್ಯರ ಹೆಸರನ್ನು ವೈದ್ಯಕೀಯ ಮಂಡಲಿಗೆ ಸೂಚಿಸಬಹುದಷ್ಟೇ. ಆದರೆ ವೈದ್ಯಕೀಯ ಮಂಡಲಿಯು ತಪ್ಪಿತಸ್ಥರ ವಿರುದ್ಧ ಸೂಕ್ತ ಕ್ರಮ ಕೈಗೊಳ್ಳುವುದೇ ಎನ್ನುವುದೇ ಅನುಮಾನಾಸ್ಪದವಾಗಿಯೇ ಉಳಿಯುತ್ತದೆ. ಈ ನ್ಯೂನತೆಯಿಂದಾಗಿಯೇ ಮಹಾರಾಷ್ಟ್ರದಲ್ಲಿ ರಾಜ್ಯ ವೈದ್ಯಕೀಯ ಮಂಡಲಿಯಿಂದ ಯಾವನೇ ಒಬ್ಬ ವೈದ್ಯ ತನ್ನ ನೊಂದಣಿ ರದ್ದುಪಡಿಸಿಕೊಂಡ ಉದಾಹರಣೆ ಸಿಗುವುದಿಲ್ಲ.

ಉದ್ದೇಶಿತ ಕಾಯಿದೆಯಡಿ ದೂರು ದಾಖಲಿಸುವ ವಿಷಯಕ್ಕೆ ಕುರಿತಂತೆ ಮಸೂದೆ ಹೀಗೆ ಹೇಳುತ್ತದೆ. "ಸಂಬಂಧಿಸಿದ ಪ್ರಾಧಿಕಾರ ಅಥವಾ ಇದಕ್ಕೆ ಬದಲಾಗಿ ಕೇಂದ್ರ ಅಥವಾ ರಾಜ್ಯ ಸರ್ಕಾರ ನೇಮಿಸಿದ ಯಾವುದೇ ಅಧಿಕಾರಿಯ ಮೂಲಕ ದೂರು ಬರದಿದ್ದಲಿ ಯಾವ ನ್ಯಾಯಾಲಯವೂ ಅಪರಾಧದ ಬಗ್ಗೆ ಪರಿಶೀಲನೆ ನಡೆಸುವುದಿಲ್ಲ."–ಪರಿಚ್ಛೇದ 28 (1).

ಇದರಿಂದಾಗಿ ನ್ಯಾಯಾಲಯದಿಂದ ನೇರವಾಗಿ ನ್ಯಾಯ ಕೋರುವ ಶ್ರೀಸಾಮಾನ್ಯನ ಮೂಲಭೂತ ಹಕ್ಕನ್ನು ನಿರಾಕರಿಸಿದಂತಾಗುತ್ತದೆ.

ಈ ಮೇಲಿನ ವಿವರಣೆಗಳು ಮಸೂದೆಯಲ್ಲಿರುವ ಪ್ರಮುಖ ಸಮಸ್ಯೆಗಳಾಗಿವೆ. ಮಸೂದೆಯಲ್ಲಿ ಕೆಲವದರೂ ಬದಲಾವಣೆ ಮಾಡದೆ ತರಲಾಗುವ ಯಾವುದೇ ಶಾಸನವು ಲಿಂಗ ಪತ್ತೆ ತಡೆಯನ್ನು ಪರಿಣಾಮಕಾರಿಯಾಗಿ ಕೈಗೊಳ್ಳುವಲ್ಲಿ ವಿಫಲವಾಗುತ್ತದೆ.

# ಮಹಿಳಾ ಸಾಹಿತ್ಯ ಸಮರ್ಥನೆಗಳು ಬೇಕೆ ?

❋ ಚಂದ್ರ

ಬಹಳಷ್ಟು ಮಹಿಳಾ ಸಾಹಿತ್ಯದ ವೇದಿಕೆಗಳಲ್ಲಿ, ಬಹಳಷ್ಟು ಮಹಿಳೆಯರ ಬರಹಗಳಲ್ಲಿ ಮತ್ತೆ ಮತ್ತೆ ಕೇಳುತ್ತಾ ಬರುತ್ತಿರುವ ವಾದ-'ಮಹಿಳಾ ಶಿಕ್ಷಣಕ್ಕೇ ಪ್ರಾಮುಖ್ಯವಿಲ್ಲದೆ ಶೋಷಣೆಗೆ ಒಳಗಾದ ಮಹಿಳೆಯರಿಂದ ಪುರುಷರಿಗೆ ಸರಿಸಮಾನವಾದ ಉತ್ತಮ ಕೃತಿಗಳ ನಿರೀಕ್ಷಿಸುವುದು ಸಾಧುವೆ ? ಲೇಖಕರಂತೆ ನಾವು ಮನೆ-ಮಠ ಬಿಟ್ಟು ಪ್ರಯಾಣಿಕರ ಬಂಗಲೆಗಳಲ್ಲಿ, ಹೋಟೆಲ್ ರೂಮಿನಲ್ಲಿ ಕುಳಿತು ಬರೆಯಲು ಸಾಧ್ಯವೇ? ಇತ್ಯಾದಿ....' ಇತ್ತೀಚೆಗೆ ಪತ್ರಿಕೆಯೊಂದರಲ್ಲಿ ಕನ್ನಡದ ಪ್ರಬುದ್ಧ ಲೇಖಕಿಯರಲೊಬ್ಬರಾದ ಶ್ರೀ ಮತಿ ಸಾರಾ ಅಬೂಬಕ್ಕರ್ ಅವರೂ ಇದೇ ಅಭಿಪ್ರಾಯವನ್ನು ಒತ್ತಿ ಹೇಳಿದ್ದಾರೆ. ಜೊತೆಗೆ 'ಸಮಾಜದ ಕಟ್ಟುಪಾಡುಗಳನ್ನು ಮೀರಿ ನಾವು ಬರೆದರೆ, ಸಮಾಜದ ಕ್ರೂರ ದೃಷ್ಟಿಯನ್ನು ಮನೆಯವರ ಅಸಹನೆಯನ್ನು ಎದುರಿಸಬೇಕಾಗುತ್ತದೆ.' ಎಂದೂ ಹೇಳಿದ್ದಾರೆ.

ನಿಜ, ಮಹಿಳಾ ಶಿಕ್ಷಣದ ವಿಚಾರ ಚಾರಿತ್ರಿಕ ಸತ್ಯ. ಮಹಿಳೆಗೆ ತನ್ನದೊಂದು ಬರೆವ ಮೇಜೂ ಇಲ್ಲದಿರಬಹುದಾದದ್ದೂ ಸತ್ಯ. ಆದರೆ ಇಂದು ಕನ್ನಡದಲ್ಲಿ ಕತೆ ಬರೆಯುತ್ತಿರುವ ಮಹಿಳೆಯರು ಬೆಳಗೆರೆ ಜಾನಕಮ್ಮನಂತೆ ಶಾಲೆ ಕಂಡಿಲ್ಲದ, ಕಾಗುಣಿತ ಕೂಡಾ ಕಲಿತಿಲ್ಲದ ಅಸಾಯಕರಲ್ಲ. ಬರೀ ಸೌಕರ್ಯಗಳಿಂದಲೇ ಉತ್ತಮ ಸಾಹಿತ್ಯ ರಚನೆಯಾಗುವಂತಿದ್ದರೆ ಬಹಳಷ್ಟು ಸೌಲಭ್ಯಗಳಿರುವ ಪುರುಷರಿಂದಲೂ ಕಳಪೆ ಕೃತಿಗಳು ಹೊರಬರುತ್ತಿರಲಿಲ್ಲ. ಇವೆಲ್ಲಾ ವಾದಗಳ ಮೀರಿ ನಿಲ್ಲಬೇಕಾದ ಕಾಲ ಇದು. ಇವೆಲ್ಲವೂ ನಮ್ಮ ಕೃತಿಗಳ ಗುಣ ಮಟ್ಟಕ್ಕೆ ಒಟ್ಟಿರುವ ಸಮರ್ಥನೆಗಳು. ಆದರೆ ಎಷ್ಟೇ ಸಮರ್ಥನೆಗಳು ನಂತರವೂ ಕೃತಿ ಕಳಪೆ ಇದ್ದರೆ ಕಳಪೆಯಾಗಿಯೇ ಉಳಿಯುತ್ತದೆಂಬುದೂ ಸತ್ಯ. ಇಂದು ಇಷ್ಟೆಲ್ಲಾ ಸಮಜಾಯಿಸಬೇಕಾಗುವಷ್ಟು ಕನ್ನಡದ ಮಹಿಳಾ ಸಾಹಿತ್ಯ ಸೊರಗಿಲ್ಲ. ಶ್ಯಾಮಲಾ ದೇವಿ, ಕೊಡಗಿನ ಗೌರಮ್ಮ, ಬೆಳಗೆರೆ ಜಾನಕಮ್ಮ, ತ್ರಿವೇಣಿ, ಎಂ. ಕೆ. ಜಯಲಕ್ಷ್ಮಿಯಂಥವರ ಒಳಗೊಂಡ ಕನ್ನಡದ ಮಹಿಳಾ ಸಾಹಿತ್ಯ ಪರಂಪರೆ ಕೂಡಾ ಅಷ್ಟೊಂದು ಕಳಪೆಯದೇನೂ ಅಲ್ಲ. ನಿಜ, ಇವರುಗಳ ಕೃತಿಗಳು ಅಮೋಘವೆನ್ನುವ ಮಟ್ಟಕ್ಕೆ ಏರಿರಲಾರವು. ಆದರೆ ಅದಕ್ಕೆ ಅವರ ಪ್ರತಿಭೆ, ಅನುಭವದ ವಿಸ್ತಾರಕ್ಕಿಂತಾ ಮುಖ್ಯವಾಗಿ ಇವರೆಲ್ಲ ತಮ್ಮ ಮೂವತ್ತರ ವರ್ಷಗಳಲ್ಲೇ ಬಸಿರು ಬಾಣಂತಿತನಗಳಲ್ಲಿ ತೀರಿಕೊಂಡದ್ದು ಹಾಗೂ ನಮಗೆ ಲಭ್ಯವಿರುವ ಬರಹಗಳೆಲ್ಲ ಇವರ ಆರಂಭದ ವರ್ಷಗಳದ್ದು ಎಂದೂ ಗಮನಿಸಬೇಕು.

ನಮ್ಮ ಸಾಹಿತ್ಯದ ಗುಣಮಟ್ಟಕ್ಕೆ ನಾವು ನಿರಂತರ ನೆಪಗಳನ್ನು ಹುಡುಕುವುದು ಅಪಾಯಕಾರಿ ಪರಂಪರೆ

ಆಗಬಲ್ಲದು ; ನಮ್ಮ ಬೆಳವಣಿಗೆಯು ಮೊಟಕುಗೊಳಿಸ ಬಹುದು, ನಮ್ಮ ಹಿಂದಿನ ಪೀಳಿಗೆಯ ಲೇಖಕಿಯರು, ನಮ್ಮ ಇಂದಿನ ಹಿರಿಯ ಲೇಖಕಿಯರು ಹೆಚ್ಚಿನ ವಿದ್ಯಾಭ್ಯಾಸದ ಅವಕಾಶವಿಲ್ಲದೆ ತಮ್ಮ ಬದುಕಿನ ಸೀಮಿತತೆಯ ಬಗ್ಗೆ ಹೇಳಿಕೊಳ್ಳುವಾಗ ಅಸತ್ಯಫೆನಿಸದ್ದು ನಿಜ. ಆದರೆ ಅದೇ ಹಿರಿಯರ ಹಿನ್ನಲೆಯ ಅರಿವಿಲ್ಲದೆ ಇಂದಿನ ವಿದ್ಯಾವಂತ–ಉದ್ಯೋಗಸ್ಥ ಹೊಸ ಪೀಳಿಗೆಯ ಲೇಖಕಿಯರೂ ಕೂಡಾ ತಮ್ಮ ಕೃತಿಗಳ ಸಮರ್ಥನೆಗೆ ಹೊರಡುವುದನ್ನು ಕಂಡಿದ್ದೇನೆ, ಆತಂಕಗೊಂಡಿದ್ದೇನೆ. ಮಹಿಳಾ ಸಾಹಿತ್ಯವನ್ನು 'ಅಡಿಗೆ ಮನೆಯ ಸಾಹಿತ್ಯ' ಎಂದು ಹೀಗಳೆಯ ಹೊರಟಿದ್ದು ತೀರಾ ವಿಷಾದವಾದರೂ, ಅಡಿಗೆ ಮನೆಯ ಅನುಭವಗಳ ನಾವು ಹಿಡಿದಿಟ್ಟದ್ದು ಹೇಗೆ ? ಸ್ಟೌವ್ ಹಚ್ಚಿದ್ದ, ಬದನೆಕಾಯಿ ಹೆಚ್ಚಿದ್ದ, ಹೇಳುವ ಕ್ರಿಯೆಗಳ ವರದಿಯಲ್ಲಿ ಅನುಭವ ಅಡಗಿಲ್ಲ, ತನ್ನ ಜೀವನದ ಬಹು ಭಾಗವನ್ನು ಮುಸಿ ಹಿಡಿದ ಅಡಿಗೆ ಮನೆಯಲ್ಲಿ ಕಳೆದ ಅಮ್ಮ–ಅಜ್ಜಿಯರ ಅನುಭವದ ಸಾಂದ್ರತೆಯ ಬಗ್ಗೆ ವಿಚಿತ್ರ ದಿಗ್ಭ್ರಮೆ ಕಾಡುತ್ತಿದೆ. ಅಲ್ಲಿ ಸೌದೆ ಒಲೆಯ ಬಿಸಿಗಿಟ್ಟ ಚಿಂತನೆಗಳೆಷ್ಟು, ಗಂಡ–ಮಕ್ಕಳೆಲ್ಲ ಹೊಸಿಲಾಚೆ ವಿಜೃಂಭಿಸುವಾಗ ಹೊಸಿಲು ದಾಟದ ನನ್ನಮ್ಮನ ಚಿಂತನೆಗಳ ಬಗ್ಗೆ ಕುತೂಹಲವಾಗುತ್ತದೆ. ಅಡಿಗೆ ಮನೆಯಲ್ಲಿ ಕುದಿದ ಆಕೆಯ ಅನುಭವಗಳ ಪದವಾಗಿ ಪದಗಳಲ್ಲಿ ಹೆಪ್ಪಾಗಿಸಲಾರದ್ದು ನನ್ನ ಬರಹದ ಮಿತಿ, ಅನುಭವದ ಮಿತಿಯಲ್ಲ ಅನಿಸುವುದೂ ಉಂಟು. ಒಂದೇ ಪರಿಸರದಲ್ಲಿ ಹುಟ್ಟಿ–ಬೆಳೆದ ಸ್ತ್ರೀ-ಪುರುಷರ ಅನುಭವದ ಭಿನ್ನತೆ ಕುತೂಹಲಕಾರಿ. ನಮ್ಮ ಸಂವೇದನೆಗಳು-ಅನುಭವಗಳು ಖಂಡಿತಾ ಪುರುಷರಿಗಿಂತ ಭಿನ್ನ, ಅದು ಸಹಜ ಕೂಡಾ ಆದರೆ ಅನುಭವ ವಿಭಿನ್ನವಿದೆಯೇ ಹೊರತು ಉತ್ಕೃಷ್ಟವಲ್ಲ, ನಿಕೃಷ್ಟವಲ್ಲ. ಅಡಿಗೆಮನೆಯಲ್ಲಿ 'ಬದನೆಕಾಯಿ ಹೆಚ್ಚಿದ್ದು' ಸಾಹಿತ್ಯವಾಗದಂತೆಯೇ, 'ಬಾರಿನಲ್ಲಿ ಬೀರು ಕುಡಿದದ್ದೂ' ಖಂಡಿತಾ ಸಾಹಿತ್ಯವಾಗೋಲ್ಲ.

ಸಾರರವರು ಹೇಳುವ ಒಂದು ಮಾತು ನಿಜ– 'ಸಮಾಜದ ಕಟ್ಟುಪಾಡುಗಳನ್ನು ಮೀರಿ ಬರೆದರೆ, ಸಮಾಜದ ಕ್ರೂರ ದೃಷ್ಟಿಯನ್ನು ಮನೆಯವರ ಅಸಹನೆಯನ್ನು ಎದುರಿಸಬೇಕು, ಅನ್ನುವುದು. ಬಹುಶಃ ಇದೇ ಕಾರಣಕ್ಕಿರಬೇಕು ನಾವು ಸ್ತ್ರೀಯರು ನಮ್ಮ ಅನುಭವಗಳ ತೆರೆದುಕೊಂಡದ್ದು ತೀರಾ ಕಡಮೆ. ಆಳಕ್ಕಿಳಿದ ನಮ್ಮ ನಿಜವಾದ ಅನಿಸಿಕೆಗಳ ಮುಟ್ಟಲು ಬೆಚ್ಚಿದೆವು. ಸೀತೆ–ಸಾವಿತ್ರಿಯರ ನಾಡಿನಲ್ಲಿ ನಮಗೆ ಹೀಗೆನ್ನಿಸುವುದಲ್ಲ ಎಂಬ ಭಯಕ್ಕೆ. ಬಹುಶಃ ಸೀತೆ–ಸಾವಿತ್ರಿಯರಿಗೂ ಹೀಗೇ ಅನಿಸಿರಬಾರದೇಕೆ ? ಎಂದು ಪ್ರಶ್ನಿಸಿದ್ದೂ ಹೆಚ್. ವಿ. ಸಾವಿತ್ರಮ್ಮನಂಥಾ ಅಲ್ಲೊಬ್ಬ ಇಲ್ಲೊಬ್ಬ ಲೇಖಕಿಯರು ಮಾತ್ರ, ನಮ್ಮ ಅನುಭವಗಳ ಮುಟ್ಟದಾಗಲೂ ಮೆಟ್ಟಿ ಬಿದ್ದಿದ್ದೇವೆ. ತೆರೆದಿಡಲು ಹಿಂಜರಿದ್ದೇವೆ. ಮೊದಮೊದಲು ಅಪ್ಪನ ಭಯ. ನಂತರ ಗಂಡನ ಭಯ ಯಾರಾದರೂ 'ಇದು ನಿಮ್ಮದೇ ಅನುಭವವಾ ?' ಕೇಳಿಬಿಟ್ಟರೆ ಭಯ, ಇಂಥಾ ಸಂಕೋಚ ಮುಜುಗರಗಳಲ್ಲಿ ಸರ್ವಕಾಲಕ್ಕೂ ಹೇಳಿಕೊಂಡು ಬಂದದನ್ನೇ, ಅನಿಸದಿದ್ದರೂ ಅನಿಸಬೇಕೆಂದದ್ದನ್ನೇ, ಜನ ನಿರೀಕ್ಷಿಸಿದ್ದನ್ನೇ, ಸಮಾಜ ಅಂಗೀಕರಿಸುವುದನ್ನೇ ಹೇಳುತ್ತಾ ಬಂದೆವು. ಪುರುಷರು ಈ ಬಗೆಯ ಭಯ ಸಂಕೋಚಕ್ಕೆ ಕೊಂಚವೂ ಒಳಗಾಗದೆ ತೆರೆದುಕೊಂಡದ್ದು ಅವರ ಸಾಹಿತ್ಯಕ್ಕೆ ಬಹಳಷ್ಟು ಹರವನ್ನು ನೀಡಿತು, ನಾವು ಗಂಡು ಮೌಲ್ಯಗಳಿಗೆ, ಗಂಡು ಮಾದರಿಗಳಿಗೆ, ಗಂಡು ನಿರೀಕ್ಷೆಗಳಿಗೆ ತಕ್ಕಂತೆ ಬರೆದೆವು. 'ಹೆಣ್ಣಾಗಿ' ಬರೆದದ್ದು ಗಟ್ಟಿ ನಿಂತ ಕೆಲವು ಲೇಖಕಿಯರು ಮಾತ್ರ. ಮಡದಿಯಾಗಿ–ಮಾತೆಯಾಗಿ ಸತೀಸಾಧ್ವಿಯಾಗಿ ಚಿತ್ರಿಸುತ್ತಾ ಬಂದು, ಈಗ ಇತ್ತೀಚೆಗೆ ತಟ್ಟನೆ ಒಂದಿಷ್ಟು ಪ್ರತಿಭಟನೆಯ ದನಿಯಾಗಿ, ತೊರೆದು ನಡೆವ ಹೆಣ್ಣಾಗಿ ಪಾತ್ರಗಳ ಮಾರ್ಪಡಿಸಿದ್ದೇನೋ ನಿಜ, ಆದರೆ ಈ ಕಪ್ಪು ಬಿಳುಪಿನ ನಡುವೆ ವಿವಿಧ ಬಣ್ಣಗಳಲ್ಲಿ ಅದ್ದಿಟ್ಟ ಸ್ತ್ರೀ–ಸಂವೇದನೆಗಳಿವೆ, ಹೆಣ್ಣು ಅನುಭವಗಳಿವೆ, ಅವು ಹೊರ

ಬೀಳಬೇಕು ಅಪ್ಪಟ ಸತ್ಯದಲ್ಲಿ ಈ ಅನುಭವದ ಗಣಿ ನಮ್ಮಲ್ಲೇ ಇದೆ. ಅದಕ್ಕೆ ನಾವು ಅಮೆರಿಕೆ ಸುತ್ತಿಬರ ಬರಬೇಕಿಲ್ಲ. ಲಂಡನ್ನಿಗೆ ಹೋಗಬೇಕಿಲ್ಲ, ಒಳಗೊಳಗೇ ಅಗೆದಗೆದು ಭಿಡೆ ಇಲ್ಲದೆ ಬರೆವ ಕಾರ್ಯ ಇದು. ನಿಜ, ಅಧ್ಯಯನ ಪ್ರಯಾಣ-ಹೊರಜಗತ್ತಿನ ಅನುಭವ ಕತೆಗೆ ಪೂರಕವಾಗಬಲ್ಲದು, ವೈವಿಧ್ಯತೆ ತರಬಲ್ಲದು, ಆದರೆ ಅನುಭವಗಳ-ಅವಕಾಶಗಳ ನಾವು ಕಿತ್ತುಕೊಳ್ಳಬೇಕು, ಯಾರೋ ಕೊಡುವರೆಂದು ಕಾದು ಕೂರಲಾಗದು. ನಾವು ರಾಮರಾಜ್ಯವನ್ನು ಧರೆಗಿಳಿಸಿ 'ಮಹಿಳೆಯರೇ ಇನ್ನು ಧೈರ್ಯವಾಗಿ ಓಡಾಡಿ' ಅನಿಸಲಾರೆವು. ಎಲ್ಲಾ ಕಾಲಕ್ಕೂ ಕ್ರಿಯಾಶೀಲ ಮಹಿಳೆ ಸಬೂಬುಗಳಿಗೆ ಬದುಕನ್ನು ಜೋತು ಬಿಟ್ಟಿಲ್ಲ, ಮಹಿಳೆಯರು ಹೊಸಿಲಾಚೆ ಹೊರಡುವುದೇ ಅಪರಾಧವೆನಿಸಿದ್ದ ಕಾಲದಲ್ಲಿ ಆರ್. ಕಲ್ಯಾಣಮ್ಮ, ಶ್ಯಾಮಲಾದೇವಿಯಂಥವರು ಸಾಮಾಜಿಕ, ಕ್ಷೇತ್ರಕ್ಕೆ ಧುಮುಕಿದ್ದು, ಸಾಮಾಜದ ಪೂರ್ವಗ್ರಹಗಳ ನಡುವೆಯೇ ದುಡಿದು ಗೆದ್ದದ್ದು ಗಮನಿಸಬೇಕು. ಇಂದಿನ ಹೊಸ ಪೀಳಿಗೆಯ ಲೇಖಕಿಯರು ಬಹಳಷ್ಟು ವಿದ್ಯಾವಂತರು, ಮತ್ತಷ್ಟು ಮಂದಿ ಉದ್ಯೋಗಸ್ಥರು, ಜಗತ್ತನ್ನು ನೋಡಬೇಕೆಂದರೆ ಏಕಾಂಗಿಯಾಗಿ ಪ್ರಯಾಣಿಸಲು ಹಿಂಜರಿಯಬೇಕಿಲ್ಲ. ಅನುಪಮ ನಿರಂಜನ, ಒಂಟಿಯಾಗಿ ಅಮೇರಿಕಾ-ಯೂರೋಪ್ ಸುತ್ತಿ ಬಂದದನ್ನು ನೆನೆಯಬಹುದು. ಇಂದು ಮಹಿಳೆ ಎಲ್ಲಾ ಕಾಲದಂತೆಯೇ ಜಾಗರೂಕವಾಗಿರಬೇಕು, ಆದರೆ ಪರದೆಯ ಹಿಂದೆ, ಹೊಸಿಲೊಳಗೇ ಉಳಿಯ ಬೇಕಿಲ್ಲ. ಇಂದು ಒಂದು ಸಂದರ್ಶನಕ್ಕೆ, ಒಂದು ವರದಿ, ಒಂದು ಲೇಖನಕ್ಕೆ ಮಹಿಳಾ ಪತ್ರಕರ್ತರು ಕಾಶ್ಮೀರ, ಪಂಜಾಬ್, ಜಾಫ್ನಾಕ್ಕೆ ಹೋಗಿ ಬರುತ್ತಿದ್ದರೆ, ನಾವು ಕನ್ನಡದ ಲೇಖಕಿಯರು ಅಂಜುಕುಳಿಗಳಾಗಬೇಕಿಲ್ಲ.

ಮಹಿಳೆಗೆ ವಿಶಿಷ್ಟ ಸಮಸ್ಯೆಗಳು ಇಲ್ಲ ಎಂದಲ್ಲ. ಸಾಮಾಜಿಕ ಕಾರಣಗಳಿಂದಾಗಿ ಹೆಣ್ಣಿನ ಸಮಸ್ಯೆಗಳು ಗಂಡಿಗಿಂತ ಭಿನ್ನ ಹಾಗೂ ಸಂಕೀರ್ಣ. ಆದರೆ ಸಾಹಿತ್ಯದಲ್ಲಿ ಅವೇ ಸಮಸ್ಯೆಗಳ ಸಂಕೀರ್ಣಗಳ ದಟ್ಟವಾಗಿ ಅಭಿವ್ಯಕ್ತಿಸಲು ಯಾವ ತಡೆ ಇದೆ ? ಎಮಿಲಿ ಬ್ರಾಂಟೆ ತನ್ನ ಬದುಕು ಪೂರಾ ಯಾರ್ಕ್‌ಷೈರ್‌ನ ಪುಟ್ಟ ಹಳ್ಳಿಯಲ್ಲಿ, ಕೋಟೆ ನಿಂತ ತಣ್ಣನೆಯ ಕಲ್ಲು ಕಟ್ಟಡದ ಏಕಾಂಗಿತನದಲ್ಲಿ ಕಳೆದಳು ವಿಚಿತ್ರ ರೋಗಕ್ಕೆ ತುತ್ತಾದ ಫ್ಲಾನರಿ ಓಕ್‌ನಾರ್ ಕೈ-ಕಾಲು ಕೂಡಾ ಅಲ್ಲಾಡಿಸಲಾಗದ ಸ್ಥಿತಿಯಲ್ಲಿ ಕೆಲವು ಗಂಟೆ ಕೂಡಾ ಬರೆಯಲಾಗದ ನಿರ್ಬಂಧನೆಯಲ್ಲಿ ಚಿತ್ರಹಿಂಸೆ ಪಟ್ಟವಳು. ಅವರ ಬದುಕಿನ ನಿರ್ಬಂಧನೆಗಳ, ಏಕಾಂಗಿತನವ, ದುರಂತವ ಅತ್ಯಂತ ತೀವ್ರವಾಗಿ, ಪ್ರಭಲವಾಗಿ, ಉತ್ಕಟವಾಗಿ ತಮ್ಮ ಕೃತಿಗಳಲ್ಲಿ ಅಭಿವ್ಯಕ್ತಿಸಿದ ಮಹಿಳೆಯರು ಇವರು.

ನಮಗೆ ಸಮಸ್ಯೆಗಳಿವೆ, ಆದರೆ ನಮ್ಮೆಲ್ಲಾ ಕೃತಿಗಳಿಗೆ ಸಮಜಾಯಿಷಿ, ಸಮರ್ಥನೆ ಹುಡುಕುವುದು ಬೇಡ. ಪುರುಷರ ಕೃತಿಗಳು ಕಳಪೆ ಅಲ್ಲ, ಇಂಥಾ ಮಿತಿಗಳನ್ನು ಮೀರಿವೆ ಎಂದಲ್ಲ. ಆದರೆ ಪುರುಷರಿಗೆ ಕಳಪೆ ಕೃತಿಗಳ ಸಮರ್ಥಿಸಲು ನಮ್ಮಂತೆ ಸಬೂಬುಗಳಿಲ್ಲ. ನಮ್ಮೊಳಗಿನ ಅಡೆತಡೆಗಳ ಗುರುತಿಸಿಕೊಳ್ಳೋಣ, ಗೆಲ್ಲೋಣ. ಅನುಭವದ ವಿಸ್ತಾರಕ್ಕೆ ಕೈಚಾಚೋಣ.



# ಮಹಿಳಾ ಇತಿಹಾಸ - ಇಣುಕು ನೋಟ

✺ ರೋಸ್‌ಲಿಂಡ್ ಮೈಲ್ಸ್

**ಶ್ರೀಮತಿ ರೋಸಲಿಂಡ್ ಮೈಲ್ಸ್ ಅವರ ಜನಪ್ರಿಯ ಹಾಗೂ ಗಮನಾರ್ಹ ಗ್ರಂಥ "ದಿ ವುಮೆನ್ಸ್ ಹಿಸ್ಟರಿ ಆಫ್ ದಿ ವರ್ಲ್ಡ್"ನ ಪೀಠಿಕೆಯೇ ಈ ಲೇಖನ. ಕಾವೆಂಟ್ರಿ ಪಾಲಿಟೆಕ್ನಿಕ್ ಕೇಂದ್ರದಲ್ಲಿ ಮುಖ್ಯಸ್ಥೆಯಾಗಿರುವ ಶ್ರೀಮತಿ ಮೈಲ್ಸ್ ಅವರ ಇನ್ನಿತರ ಪ್ರಮುಖ ಕೃತಿಗಳು—"ವುಮೆನ್ ಅಂಡ್ ಪವರ್ ಅಂಡ್ ಡೇಂಜರ್ !" ಮತ್ತು "ಮೆನ್ ಅಟ್ ವರ್ಕ್". ಅತ್ಯಂತ ಜನಪ್ರಿಯ ಲೇಖಕಿಯಾಗಿರುವ ಶ್ರೀಮತಿ ಮೈಲ್ಸ್ ಅವರ "ರಿಟರ್ನ್ ಟು ಏಡನ್" ಮತ್ತು ಬಿಟ್ಟರ್ ಲಗೇಸಿ" ಕಾದಂಬರಿಗಳು ಅತ್ಯಂತ ಹೆಚ್ಚು ಖರೀದಿಯ ದಾಖಲೆ ಸ್ಥಾಪಿಸಿವೆ. ಲೇಖನದ ಕನ್ನಡ ಅನುವಾದಕಿ : ಸಂಪಿಕೆ ಪುಷ್ಪ.**

"ಇತಿಹಾಸವೆಂದರೆ ಏನು ?" ಎಂದು ಪ್ರಶ್ನಿಸಿದ ಖ್ಯಾತ ಇತಿಹಾಸಕಾರ ಗಿಬ್ಸನ್, "ಪುರುಷರ ಅಪರಾಧ, ತಪ್ಪು-ಒಪ್ಪು ಮತ್ತು ದುರಾದೃಷ್ಟಗಳ ದಾಖಲೆಗಿಂತ ಸ್ವಲ್ಪ ಹೆಚ್ಚು ಅಷ್ಟೆ" ಎಂದು ಉದ್ಗರಿಸಿದ್ದ. ಅಂತೂ, ಇಂತೂ ತೊಟ್ಟಿಲು ತೂಗುವ ಕೈ ದಾಖಲೆಯನ್ನು ಸರಿಪಡಿಸಲು ಲೇಖನಿಯನ್ನು ಕೈಗೆತ್ತಿಕೊಂಡಿದೆ. ಚರಿತ್ರೆಯಲ್ಲಿ ಮಹಿಳೆಯರೂ ಇದ್ದಾರೆ !

ಇತಿಹಾಸದ ಲಭ್ಯವಿರುವ ದಾಖಲೆಗಳಿಂದ, ಆದ್ಯಕ್ಕೆ ಬೆಂಬಲ ಸಿಗಲಾರದು. 1620 ನೇ ಇಸವಿಯ ಐತಿಹಾಸಿಕ 'ಮೇಫ್ಲವರ್ ಯಾತ್ರೆ'ಯಲ್ಲಿ ಭಾಗವಹಿಸಿದ್ದರ ನೆನಪಿಗಾಗಿ ಪ್ಲೇಮೌತ್‌ನಲ್ಲಿ ಸ್ಮಾರಕ ಶಿಲೆಯನ್ನು ಕೆತ್ತಲಾಯಿತು. ಹೊಸ ಜಗತ್ತನ್ನು ನಿರ್ಮಿಸಲು ಅವರ ಜತೆಸಾಗಿದ್ದ 17 ಮಹಿಳೆಯರಲ್ಲಿ ಒಬ್ಬರ ಹೆಸರೂ ಕಾಣಲಿಲ್ಲ. ಪ್ರತಿಯೊಂದು ಶತಕದಲ್ಲಿ ಕೂಡಾ ಇತಿಹಾಸಕಾರರು ಸ್ತ್ರೀಯರನ್ನು ಸಂಪೂರ್ಣವಾಗಿ ನಿರ್ಲಕ್ಷಿಸಿದ್ದಾರೆ, 1238ರ ಘಟನೆಯೊಂದನ್ನು ನೋಡಿ- ಇಂಗ್ಲೆಂಡಿನ ದೊರೆಯ ಮಲಗುವ ಕೋಣೆಗೆ ಚಾಕು ಹಿಡಿದ ಹಂತಕ ಪ್ರವೇಶಿಸುವುದನ್ನು ರಾತ್ರೋರಾತ್ರಿ ಕಂಡವಳು ಒಬ್ಬ ದಾಸಿ. ಅವಳು ಆ ರಾತ್ರಿ 'ಹಾಡುತ್ತಾ, ಜಾಗರಣೆ ಮಾಡುತ್ತಾ ಇದ್ದಾಗ ಹಂತಕನನ್ನು ಕಂಡಳು. ಇದರಿಂದ ಅವಳು ಇತಿಹಾಸದ ದಿಕ್ಕನ್ನೇ ಬದಲಿಸಿದಳು. ಪಾಪ ! ದಾಖಲೆಗಾರ ಮ್ಯಾಥ್ಯೂ ಡಿ ಪ್ಯಾರಿಸ್‌ಗೆ ಅವಳ ಹೆಸರೂ ತಿಳಿಯಲಿಲ್ಲವಂತೆ !

ಇಷ್ಟಾದರೂ ವಿಶ್ವದ ಮಹಿಳೆಯರಿಗೂ ಇತಿಹಾಸ ಉಂಟು. ನಾವು ಯೋಚಿಸಿರುವುದಕ್ಕಿಂತ ಅದು ಹೆಚು ಸಂಪದ್ಭರಿತವಾಗಿದೆ. ಮಾನವನ ಕುಲ ವಿಕಾಸದಲ್ಲಿ ಮಹಿಳೆಯರ ಕೊಡುಗೆಯ ವ್ಯಾಪ್ತಿ, ಶಕ್ತಿಯನ್ನು ಅಂದಾಜು ಮಾಡುವುದು ಈ ಪುಸ್ತಕದ ಉದ್ದೇಶ. ಜತೆಗೆ ಸಾಂಸ್ಕೃತಿಕ, ವಾಣಿಜ್ಯ, ಗೃಹಕೃತ್ಯ, ಭಾವನಾತ್ಮಕ, ಸಾಮಾಜಿಕ, ಮತ್ತು ಲೈಂಗಿಕ ಸ್ತರಗಳಲ್ಲಿ ಮಹಿಳೆಯರ ಯಶಸ್ಸಿನ ಬಗೆಗೂ ಪುಸ್ತಕದಲ್ಲಿ ನೋಟ ಹರಿಸಲಾಗಿದೆ, ನಮ್ಮ ಹಿಂದಿನ ಜಗತ್ತು ಅಸಿರಿಯನ್ ಸಮರ ರಾಣಿಯರು, ಮಾತೃ ದೇವತೆ, ವಿಶ್ವದ ಆಡಳಿತದ ಚುಕ್ಕಾಣಿ ಹಿಡಿದವರು, ವಿಜ್ಞಾನಿಗಳ, ಮನೋ ವಿಜ್ಞಾನಿಗಳ, ಸಾಧು-ಸಂತರ, ಪಾಪಿಗಳ, ಮದರ್ ತೆರೇಸಾ, ಚಿಯಾಂಗ್ ಚಿಂಗ್ ಅವರ ಅಸಂಖ್ಯ ಕತೆಗಳಿಂದ ಕೂಡಿದೆ.

ಮರೆತ ನಾಯಕಿಯರಲ್ಲೂ ಅದ್ಭುತ ಕತೆಗಳಡಗಿವೆ. ಅದನ್ನು ಯಾರೂ ಕೇಳಿಲ್ಲ ಅಷ್ಟೆ, ಇತಿಹಾಸ ಕುರಿತ ನಮ್ಮ ಅಭಿಪ್ರಾಯದ ಗಮನವನ್ನು ಪುರುಷರತ್ತ ಮಾತ್ರ ಕೇಂದ್ರಿಕರಿಸುವುದರಿಂದ ಆ ಕತೆಗಳೆಲ್ಲ ಮರೆಯಾಗಿಬಿಡುತ್ತದೆ. ಇದು ಮಾನವ ಕುಲದ ಅರ್ಧ ಭಾಗಕ್ಕೆ ಮಾಡುವ ಅನ್ಯಾಯವೇ ಆಗಿದೆ. ಅದು ಒಕ್ಕಣ್ಣಿನ ದೃಷ್ಟಿಯಾಗಿ

ಬಿಡುತ್ತದೆ, ಪುರುಷರ ಪ್ರತಿಯೊಂದು ವಿವರವನ್ನು ವೈಭವೀಕರಿಸಲೆತ್ನಿಸಿದ್ದಾರೆ, ಇತಿಹಾಸಕಾರರು, ಅದೇ ಜನಪ್ರಿಯತೆ ಪಡೆದುಕೊಳ್ಳದೆ ಪ್ರಸಿದ್ಧ ಮಹಿಳೆಯರ ಕಾರ್ಯ ಚಟುವಟಿಕೆ ಮಾತ್ರ ಪುಟಗಳಲ್ಲಿ ಮಂಗಮಾಯವಾಗಿದೆ. ಇತಿಹಾಸದುದ್ದಕ್ಕೂ ರೋಮನ್ ಚಕ್ರಾಧಿಪತ್ಯದಂಥ ದೊರೆತನವನ್ನು ವೈಭವೀಕರಿಸಿ ಪ್ರತಿಯೊಂದು ಪೀಳಿಗೆಯೂ ಅದನ್ನು ತನ್ನದೇ ರೀತಿಯಲ್ಲಿ ಅರಿತು ಜೀವಂತವಾಗಿರಿಸುವಂತೆ ಮಾಡಲಾಗಿರುವುದು ರಹಸ್ಯವೇನಲ್ಲ. ಜೇನ್ ಆಸ್ಟಿನ್ ಹೇಳಿದ್ದು ಸರಿಯಾಗಿಯೇ ಇದೆ. "ಇತಿಹಾಸ ಇಷ್ಟೊಂದು ಮಂಕಾಗಿದೆಯೇ ಎಂದು ಎಷ್ಟೋ ಬಾರಿ ಯೋಚಿಸಿರುವೆ. ಏಕೆಂದರೆ ಅದರ ಬಹುಪಾಲು ಹೊಸ ನಿರ್ಮಾಣ ಎಂದೇ ನನ್ನ ಭಾವನೆ."

ಇದಕ್ಕೆ ಪ್ರತಿಯಾಗಿ ಮಹಿಳೆಯರ ಇತಿಹಾಸವು ಈಗಷ್ಟೇ ನಿರ್ಮಾಣವನ್ನು ಆರಂಭಿಸಿದೆ. ಪುರುಷರು ಘಟನೆಗಳ ದಾಖಲೆ, ನಿರೂಪಣೆ ಮತ್ತು ವಿಶ್ಲೇಷಣೆಯ ಕಾರ್ಯವನ್ನು ಕ್ರಿ. ಪೂ. ಮೂರನೆ ಶತಮಾನದಲ್ಲಿ, ಆರಂಭಿಸಿದರು, ಮಹಿಳೆಯರ ವಿಚಾರದಲ್ಲಿ, 19 ನೇ ಶತಮಾನದವರೆಗೂ ಈ ವಿಧಾನ ಶುರುವಾಗಿರಲೇ ಇಲ್ಲ. ಮಹಿಳೆಯರ ಇತಿಹಾಸದ ಪ್ರಾರಂಭದಲ್ಲಿ ರಾಣಿಯರ ಪಟ್ಟಿ, ವಿದ್ವಾಂಸ ಮಹಿಳೆಯರ ಗುರುತಿಸುವ ಯತ್ನ ಮಾಡಲಾಗಿತ್ತು. ಪುರುಷರ ಸಾಮರ್ಥ್ಯ ಮತ್ತು ಅಧಿಕಾರಯುತ ಮುಖಭಾವದ ಹಿನ್ನಲೆಯಲ್ಲಿ, ನಾಯಕರ ಪ್ರತಿಬಿಂಬದಲ್ಲಿ ಜೋನ್ ಆಫ್ ಆರ್ಕ್, ಫ್ಲಾರೆನ್ಸ್ ನೈಟಿಂಗ್‌ಗೇಲ್, ಕ್ಯಾಥರೀನ್ ದಿ ಗ್ರೇಟ್ ಇವರ ಸೃಷ್ಟಿಗೆ ಪ್ರಯತ್ನ ಮಾಡಲಾಗಿತ್ತು. ಇದು ಇತಿಹಾಸವನ್ನು ವಿಕೃತಗೊಳಿಸುವ ಯತ್ನವೆಂದರೆ ತಪ್ಪಾಗಲಾರದು. ಏಕೆಂದರೆ ಪುರುಷ ದೊರೆ ಹಾಗೂ ಪ್ರತಿಭಾಶಾಲಿಗಳಿಗಿಂತಾ ಅಥವಾ ಅಷ್ಟೇ ಸಂಖ್ಯೆಯಲ್ಲಿ ಮಹಿಳೆಯರೂ ಇರುವ ಸಾಧ್ಯತೆ ಇತ್ತು. ಪುರುಷರು ಅವಕಾಶ, ಪೂರಕ ಸನ್ನಿವೇಶದಿಂದ ಮೇಲಕ್ಕೆ ಬಂದರು. ಆದರೆ ಅಂದಿನ ಸಂದರ್ಭದಲ್ಲಿ, ಅಂಥ ಸಾಹಸ ಚಟುವಟಿಕೆಯಲ್ಲಿ ಅವಕಾಶದಿಂದ ವಂಚಿತರಿಂದ ಮತ್ತು ಅಂಥ ಕ್ರಿಯೆಯಲ್ಲಿ ತೊಡಗಿಸಿಕೊಳ್ಳಲಾಗದ ಮಹಿಳೆಯರ ಬಗೆಗೆ ಈ ಇತಿಹಾಸ ಇಣಕು ನೋಟ ಕೂಡ ಬೀರಿಲ್ಲ. ಹೀಗಾಗಿ ಈ ದಾಖಲೆಯು ಎಷ್ಟರ ಮಟ್ಟಿಗೆ 'ಸಮಾನತೆ' ಯನ್ನು ತೋರಿದೆ ?

ಹಾಗಾದರೆ ವಿಶ್ವ ಮಹಿಳಾ ಇತಿಹಾಸವೆಂದರೆ ಏನು ? ಪುರುಷರ ಕಾರ್ಯ ನಿರ್ವಹಣೆ ಬಗೆಗೆ ಪೂರ್ಣವಾಗಿ ಕೇಂದ್ರಿಕೃತವಾದ ಸಾಂಪ್ರದಾಯಿಕ ಇತಿಹಾಸವು ಉಂಟು ಮಾಡಿರುವ ಕಂದರವನ್ನೂ ಮುಚ್ಚುವ ಪ್ರಯತ್ನವನ್ನು ಅದು ಮಾಡಬೇಕು. ಮಹಿಳೆಯರ ಬದುಕಿಗೆ ಅವರ ಘನತೆ, ಗೌರವಕ್ಕೆ ತಕ್ಕಂತೆ ಗಮನ ನೀಡಬೇಕು. ನಾವು ಈಗ ಯಾವುದನ್ನು ಇತಿಹಾಸವೆಂದು ಕರೆಯುತ್ತೇವೆಯೋ ಅದರ ಮಹಿಳಾ ಭಾಗವನ್ನು ಮರಳಿ ಪಡೆವ ಕಾರ್ಯ ಸಲಭ ಸಾಧ್ಯವಲ್ಲ. ಆದುದರಿಂದ ಯಾವುದೇ ಮಹಿಳಾ ಇತಿಹಾಸವು ಖಾಲಿ ಬಿಟ್ಟಿರುವ ವಿಷಯ, ತಪ್ಪು-ಒಪ್ಪು, ಅರ್ಧ–ಸತ್ಯಗಳ ಬಗೆಗೆ ಹೆಚ್ಚು ಎಚ್ಚರದಿಂದಿರಬೇಕು.'ಮೌನವನ್ನು ಕೇಳಬೇಕು; ಅವು ಕೂಗುವಂತೆ ಮಾಡಬೇಕು.'

ಮಹಿಳೆಯರನ್ನು ಕುರಿತು ವ್ಯಕ್ತಪಡಿಸಿರುವ ಕೆಟ್ಟ ಅಭಿಪ್ರಾಯಗಳನ್ನು ತೊಡೆದು ಹಾಕುವುದು ಮಹಿಳಾ ಇತಿಹಾಸವನ್ನು ಪುನರ್ ರಚಿಸುವವರ ಎರಡನೇ ಗುರಿಯಾಗಿದೆ. 'ಮಹಿಳೆಯರು ಗೂಬೆಯಂತೆ ಬದುಕುತ್ತಾರೆ; ಪ್ರಾಣಿಗಳಂತೆ ದುಡಿಯುತ್ತಾರೆ ಮತ್ತು ಹುಳುಗಳಂತೆ ಸಾಯುತ್ತಾರೆ' ಎಂದು ಇಂಗ್ಲಿಷ್ ಡಚ್ಚಸ್ ಆದ ನ್ಯೂಕ್ಯಾಸಲ್‌ನ ಮಾರ್ಗರೇಟ್ 17 ನೇ ಶತಮಾನದಲ್ಲಿ ಬರೆದಿದ್ದರು. ಮಹಿಳೆಯರ ಮೇಲೆ ವ್ಯವಸ್ಥಿತವಾಗಿ ನಡೆಯುವ ಹಿಂಸಾಚಾರ ಮತ್ತು ದೌರ್ಜನ್ಯವನ್ನು ಸ್ತ್ರೀ-ಪುರುಷರಿಬ್ಬರೂ ಒಪ್ಪಿಕೊಳ್ಳಲೇಬೇಕು. ಇದು ಹೆಂಡತಿಯನ್ನು ಹೊಡೆಯುವ, ಭೂತ ಬಿಡಿಸುವ, ಜನನಾಂಗವನ್ನು ವಿಕೃತಗೊಳಿಸುವ, ಕೊಲೆಯ ರೀತಿಯಾಗಿರಬಹುದು. ಪುರಾತನ

ಇತಿಹಾಸದ ತಪ್ಪುಗಳನ್ನು ಹೆಕ್ಕುವಾಗ ಮಹಿಳೆಯರ ಮೇಲಿನ ಈ ಹಿಂಸೆಯನ್ನು ಗಮನಿಸುವುದು ಆದ್ಯ ಕರ್ತವ್ಯವಾಗಿದೆ,

ಈ ಹಿನ್ನಲೆಯಲ್ಲಿ ಮಹಿಳಾ ಇತಿಹಾಸವು ಎರಡು ಪ್ರಮುಖ ಪ್ರಶ್ನೆಗಳಿಗೆ ವಿವರ ಮತ್ತು ವಿಶದವಾದ ಉತ್ತರವನ್ನು ತೋರಿಸಬೇಕಾಗಿದೆ. ಆ ಪ್ರಶ್ನೆಗಳು ಯಾವುವೆಂದರೆ ಮಹಿಳೆಯರ ಅಧೀನತೆಯನ್ನು ಜಾರಿಗೊಳಿಸುವಲ್ಲಿ ಪುರುಷರು ಹೇಗೆ ಯಶಸ್ವಿಯಾದರು? ಮತ್ತು ಪುರುಷರು ಅದರಿಂದ ಮುಕ್ತರಾಗುವಂತೆ ಮಹಿಳೆಯರೇಕೆ ಮಾಡಿದರು? ಮೂಲ ಉತ್ಪತ್ತಿ ಬಗೆಗೆ ಒಂದು ಮಾತು ಹೇಳಿದೆ- ಪ್ರಕೃತಿ ಮಾತೆಯು ಜೀವ ಉತ್ಪತ್ತಿಯ ಪ್ರಾಥಮಿಕ ಕಾರ್ಯ ನಿರ್ವಹಿಸುವ ಹೊರೆಯನ್ನು ಮಹಿಳೆ ಮೇಲೆ ಹಾಕಿದಳು ಅದಕ್ಕೆ ಸಮಾನವಾಗಿ ಹೊಣೆ ಹೊರುವವರ ಬಗೆಗೆ ಮಾತೆ ಯೋಚಿಸಲಿಲ್ಲವಂತೆ! ಆದುದರಿಂದ ಅವರು ತಮ್ಮ ಮತ್ತು ಮಕ್ಕಳ ರಕ್ಷಣೆ ಪಡೆಯಲು ಪ್ರಭುತ್ವ ಪಡೆದವರ ಒಪ್ಪಿಗೆ ಪಡೆಯಬೇಕಾಯಿತು. ಆದರೆ ಇತಿಹಾಸದ ಕೆಲ ದಾಖಲೆಗಳಂತೂ ಪುರಾತನ ಸಮಾಜದಲ್ಲಿ ಮಹಿಳೆಯರಿಗೆ 'ಮುನ್ನಡೆದ' ಸಂಸ್ಕೃತಿಯಲ್ಲಿಯದಕ್ಕಿಂತ ಹೆಚ್ಚು ಸಮಾನತೆಯ ಅವಕಾಶವಿತ್ತೆಂದು ಹೇಳುತ್ತವೆ. ಇಲ್ಲಿ ಪುರುಷ ಪ್ರಭುತ್ವವನ್ನು ಬದುಕಿನ ಪ್ರತಿಯೊಂದು ಅಂಶದಲ್ಲಿಯೂ ತೋರಿಸಲೆತ್ನಿಸಲಾಗಿದೆ. ಧಾರ್ಮಿಕ, ಜೀವಶಾಸ್ತ್ರ, ವೈಜ್ಞಾನಿಕ, ಮನೋವಿಜ್ಞಾನ ಮತ್ತು ಆಧುನಿಕ ಕಾರಣಗಳ ನೀಡಿ ಸ್ತ್ರೀಯರು ಪುರುಷರಿಗಿಂತ ಕೀಳು ಎಂಬ ಭಾವನೆಯನ್ನು ಬಿತ್ತಲಾಗಿದೆ. ಪ್ರತಿಯೊಂದು ಕಾಲದಲ್ಲಿಯೂ ಪುರುಷ ಪರಮಾಧಿಕಾರದ ಬಗೆಗೆ ಸಂಪ್ರದಾಯವಾದಿಗಳು ಪುನರುಚ್ಚರಣೆಯನ್ನೇ ಮಾಡಿದ್ದಾರೆ, ಎಲ್ಲಾ ಪ್ರಜಾಸತ್ತಾತ್ಮಕ ಪ್ರಯೋಗ, ಎಲ್ಲ ಕ್ರಾಂತಿ, ಸಮಾನತೆಯ ಎಲ್ಲ ಬೇಡಿಕೆ, ಈವರೆಗೆ ಲೈಂಗಿಕ ಸಮಾನತೆಯಿಂದ ದೂರವಾಗಿಯೇ ಇದೆ. 'ಪ್ರಕೃತಿದತ್ತ'ದ ಹೆಸರಿನಲ್ಲಿ ಮಹಿಳೆಯರಿಗೆ ಸ್ವಯಂ ನಿರ್ಧಾರದ ಮಾನವ ಹಕ್ಕನ್ನು ಕಿತ್ತುಕೊಳ್ಳುವಂತೆ ಮಾಡಲಾಗಿದೆ,

ಆಯಿತು, ಪುರುಷರು ಹತೋಟಿ ಪಡೆದುಕೊಂಡರು. ಆದರೆ ಮಹಿಳೆಯರೇಕೆ ಅದಕ್ಕೆ ಅವಕಾಶ ಕೊಟ್ಟರು? ಪುರುಷರ ಪ್ರಭುತ್ವದ 'ಅನಿವಾರ್ಯತೆ' ಮಧ್ಯೆ ಈ ಪ್ರಶ್ನೆಗೆ ಉತ್ತರ ಅಡಗಿದೆ. ಒಬ್ಬ ಪುರುಷ (ತಂದೆ)ನಿಂದ ಮತ್ತೊಬ್ಬ (ಪತಿ)ನಿಗೆ ಮಕ್ಕಳೆಂದು ದಾನವಾಗಿ ಅರ್ಪಿತರಾಗುವ ಮಹಿಳೆಯರು ಕಾನೂನು, ಆರ್ಥಿಕ, ಮತ್ತು ದೈಹಿಕವಾಗಿ ಪುರುಷರ ಪ್ರಾಬಲ್ಯಕ್ಕೆ ಒಳಗಾಗಿರುವುದು ಸಹಸ್ರಾರು ವರ್ಷದ ನೈಜ ಚಿತ್ರವಾಗಿದೆ. ಪತ್ನಿಯ ಶೀಲ ಶಂಕಿಸಿ ಅವಳ ಕೊಲೆ ಮಾಡುವ ಹೇಯ ಕೃತ್ಯ ನಡೆಯುತ್ತದೆ ಎಂಬುದೇ ಅಂಥ ಚಿತ್ರಕ್ಕೊಂದು ಸಾಕ್ಷ್ಯ, ದೈಹಿಕ ಶಿಕ್ಷೆಯ ಬೆಂಬಲದಿಂದ ಮತ್ತು ಅದನ್ನು ಪೂರ್ಣ ಹತೋಟಿಗೆ ಬಳಸಿಕೊಳ್ಳುವ ಮೂಲಕ ಮಾನಸಿಕ ಹಿಂಸೆ ಉದ್ಭವವಾಯಿತು, ಮಾನಸಿಕ ಮತ್ತು ದೈಹಿಕವಾಗಿ ಆದೇಶ, ಆಜ್ಞೆಗಳಿಗೆ ಒಳಗಾದ ಮಹಿಳೆಯರು ತಮ್ಮ ಪುರುಷರ ಪೂರೈಕೆಗೆ ಅಗತ್ಯವಾದಂತೆ ರೂಪಗೊಳ್ಳುವ ಸ್ಥಿತಿ ಉಂಟಾಯಿತು. "ನಮ್ಮ ಜಗತ್ತು ಪುರುಷ ಪ್ರಭುತ್ವದ ಉತ್ಪಾದನೆಯಾಗಿದೆ" ಎಂದು ಡೋರಾ ರಸಲ್ ಉದ್ಗರಿಸಿದ್ದು ಈ ಹಿನ್ನಲೆಯಲ್ಲಿಯೇ. ಹಾಗಾದರೆ ಮಹಿಳೆಯರು ಯೋಚಿಸಲುಸಾಧ್ಯವಾದದನ್ನು ಹೇಗೆ ಚಿಂತಿಸಬಲ್ಲರು? ವರ್ಜೀನಿಯಾ ವುಲ್ಫ಼ ಮಾತಿನಲ್ಲಿ ಹೇಳಬೇಕಾದರೆ "ಗೂಡಿನಲ್ಲಿ ದೇವತೆಯನ್ನು ಕೊಲ್ಲುವುದು ಹೇಗೆ?" ಕೊನೆಗೊಂದು ಮಾತು ಹೇಳಬೇಕೆಂದರೆ. ಮಹಿಳೆಯರು ತಮ್ಮ ಪರಾಧೀನತೆಯ ಸಂಚಿನಲ್ಲಿ ಸೇರಿಕೊಂಡಿದ್ದಾರೆ. ಇಂಥ ತಂತ್ರಕ್ಕೆ ಅವಕಾಶ ಮಾಡಿಕೊಟ್ಟು, ಅದೇ ರೀತಿ ಪುರುಷರೊಂದಿಗೆ ಬದುಕಬೇಕೆಂದುಕೊಂಡು, ತಮ್ಮದೇ ರೀತಿಯ ಪರಿಹಾರ ಕಂಡುಕೊಂಡು ಪುರುಷ ಪ್ರಾಬಲ್ಯದ ಇಡೀ ವ್ಯವಸ್ಥೆ

ಬದುಕುಳಿಯುವಂತೆ ಮಾಡಿದ್ದಾರಲ್ಲದೆ, ಅದರಲ್ಲಿ ತಮ್ಮ ಮಕ್ಕಳನ್ನೂ ವಂಚಿಸಿದ್ದಾರೆ.

ಇಷ್ಟಾದರೂ ಮಹಿಳೆಯರು ಅಂತಿಮವಾಗಿ ಪುರುಷರ ಅಥವಾ ಇತಿಹಾಸಕ್ಕೆ ಪೂರ್ಣವಾಗಿ ಬಲಿಯಾಗಿಲ್ಲ ಎಂಬುದು ಸಮಾಧಾನದ ವಿಷಯ. ಅವರು ಹೆಚ್ಚು ಶಕ್ತಿಶಾಲಿಯರಾಗಿ ಮತ್ತು ಅದೃಶ್ಯರಾಗಿ ಬದುಕುಳಿದಿದ್ದಾರೆ. ಹೇರಲ್ಪಟ್ಟ ಮಕ್ಕಳ ಹೆರುವ ಕೆಲಸದಿಂದ ಕೊನೆಗೂ ಅವರಿಗೆ ಮುಕ್ತಿ ದೊರೆತಿದೆ. ಹೆರುವ ಕೆಲಸ ಈಗ ಬಲಾತ್ಕಾರವಾಗಿಲ್ಲ, ಬಯಸಿದರೆ ಮಾತ್ರ. ಈಗ ಅವರು ಕಂದಾಚಾರವನ್ನು ಸರಿಪಡಿಸುವ ವಿಧಾನದಲ್ಲಿದ್ದಾರೆ. ಪಿತೃ ಪ್ರಧಾನ ವ್ಯವಸ್ಥೆಯ ಕಾಲ ಮುಗಿಯಿತು. 'ತಾಳಿಕೊಳ್ಳಲಾಗದಂಥ ಬದುಕಿನ ಹಂತಕ್ಕೆ ಬಂದಿದ್ದೇವೆ, ನಾವು, ಮಹಿಳೆಯರು ಜತೆಗೂಡುತ್ತಿದ್ದೇವೆ" ಎಂದು 1980ರ ಅಮೇರಿಕ ಮಹಿಳಾ ಪೆಂಟಗನ್ ಕ್ರಿಯಾ ತಂಡ ಹೇಳಿತು. ಇತಿಹಾಸ ನಿರ್ಮಿಸಲು ಪುರುಷರಿಗೆ ಮಹಿಳೆಯರು ಅವಕಾಶ ಕೊಡುತ್ತಾ ಹೋದರೆ ತಪ್ಪಿಸಿಕೊಳ್ಳಲಾಗದ ಪರಿಣಾಮಗಳಿಗೆ ನಾವೇ ಜವಾಬ್ದಾರರಾಗಿಬಿಡುತ್ತೇವೆ.

ಆದುದರಿಂದ ಮಹಿಳೆಯರನ್ನು ಅವರ ಐತಿಹಾಸಿಕ ಸಂಕೋಲೆಗಳಿಂದ ಮುಕ್ತಗೊಳಿಸುವ ಪ್ರಯತ್ನಗಳಾಗಬೇಕಾಗಿದೆ. ಯಾವ ಸರಪಳಿ ಇದು ? ವಧು ದಹನ ಮತ್ತು ಲೈಂಗಿಕಾಂಗ ವಿಕೃತಗೊಳಿಸುವಂಥ ಪೈಶಾಚಿಕ ಕೃತ್ಯಗಳಿಂದ ಅವರನ್ನು ದೂರ ತರಬೇಕಾಗಿದೆ. ಈ ಪುರಾತನ ಪದ್ಧತಿ 20ನೇ ಶತಮಾನದಲ್ಲಿಯೂ ಕಾಣ ಸಿಗುವುದು ನಾಗರೀಕತೆಗೇ ಅವಮಾನ. ಈ ಕ್ರೂರ ಪದ್ಧತಿ ವಿರುದ್ಧ ಅರಿವು ಮೂಡಿಸುವುದರ ಜೊತೆಗೆ ಅದನ್ನು ಬೇರು ಸಮೇತ ಕಿತ್ತೊಗೆಯುವ ಕೆಲಸವಾಗಬೇಕಾಗಿದೆ. ಈ ಶತಮಾನದಲ್ಲಿ ಹೊಸ ತಂತ್ರ ಜ್ಞಾನ, ವೈದ್ಯ ವಿಜ್ಞಾನದಲ್ಲಿನ ಪ್ರಗತಿ, ಮತ್ತು ನಾಗರೀಕರಣವು ಮಹಿಳೆಯರಿಗೆ ಸಾಕಷ್ಟು ಸ್ವಾತಂತ್ರ್ಯ ಒದಗಿಸಿಕೊಟ್ಟಿದೆ. ಆದರೆ ಪ್ರತಿಯೊಂದೂ ತನ್ನ ಬೀಜದಲ್ಲಿಯೇ ಅದನ್ನು ಮಹಿಳೆ ವಿರುದ್ಧ ಪ್ರಯೋಗಿಸುವ ತಂತ್ರ ಕೂಡ ರೂಪಿಸಿದೆ. ಇದರಿಂದ ಹೊಸ ರೀತಿಯ ಶೋಷಣೆ, ಹೊಸ ಬಗೆಯ ದಂಡಿಮೆ, ಬದುಕಿನ ಆಶಯದ ಮೇಲೆ ಹೊಸ ರೀತಿಯ ಆಕ್ರಮಣ ರೂಪುಗೊಳ್ಳುವಂತಾಗಿದೆ. ಉದಾಹರಣೆಗೆ ಅಮ್ನಿಯೋಸಿಂಥಿಸಿಸ್ ಪರೀಕ್ಷೆಯನ್ನೇ ನೋಡಿ, ಆರೋಗ್ಯ ಪೂರ್ಣ ಮಕ್ಕಳ ಜನನಕ್ಕೆ ಪ್ರೇರಣೆ ನೀಡಲು ರೂಪಿಸಿದ ಈ ಪರೀಕ್ಷೆಯು ಜನನ ಪೂರ್ವ ಲಿಂಗ ಪತ್ತೆಗಾಗಿ ಬಳಕೆಯಾಗುತ್ತಿದೆ. ಮಗುವಿನ ಲಿಂಗ ತಿಳಿದುಕೊಂಡು ಹೆಣ್ಣು ಭ್ರೂಣವನ್ನು ಗರ್ಭಪಾತ ಮೂಲಕ ಇಲ್ಲವಾಗಿಸುವ ಕ್ರಿಯೆ ನಡೆಯುತ್ತಿದೆ. ಮುಂಬೈನ ಒಂದು ಕ್ಲಿನಿಕ್ 1984–85ರಲ್ಲಿಯೇ 16,000 ಸ್ತ್ರೀ ಭ್ರೂಣನಾಶಕ್ಕೆ ಗರ್ಭಪಾತ ಮಾಡಿತ್ತೆಂದು ವರದಿಗಳು ತಿಳಿಸುತ್ತವೆ.

ಇಷ್ಟೊಂದು ಅಗಾದ ಪ್ರಮಾಣದ ವಿಷಯದ ಬಗೆಗೆ ಅನೇಕ ಮುಂದಿ ಬರೆಯಲೆತ್ನಿಸಿರಬಹುದು. ಎಷ್ಟು ಮಹಿಳೆಯರು ಬರೆಯಲಿದ್ದಾರೋ ಅಷ್ಟೇ ಭಿನ್ನವಾದ ಇತಿಹಾಸ ಕೂಡಾ ಕೈಗೆ ಸಿಗಬಹುದು. ಈ ಗ್ರಂಥ ಸಮಗ್ರವಾಗುವ ಪ್ರಯತ್ನ ಮಾಡಿಲ್ಲ. ಮಹಿಳೆಯರ ಇತಿಹಾಸ ಬರೆಯುವ ಎಲ್ಲಾ ಸಮಸ್ಯೆಯನ್ನು ಪರಿಹರಿಸುವ ಉದ್ದೇಶವೂ ಈ ಗ್ರಂಥಕ್ಕಿಲ್ಲ. ಇನ್ನಷ್ಟು ಉತ್ತಮಪಡಿಸಬಹುದೆಂದು ಅನೇಕ ಮುಂದಿ ಹೇಳಬಹುದು ದಯೆಯಿಟ್ಟು ಪ್ರಯತ್ನಿಸಿ - ನಮಗೆ ಎಷ್ಟು ಸಾಧ್ಯವೋ ಅಷ್ಟು ಮಹಿಳೆಯರ ಇತಿಹಾಸ ಗ್ರಂಥಗಳು ಬೇಕಾಗಿವೆ. ಪಕ್ಷಪಾತದಿಂದ ಕೂಡಿದ ಸಾಂಪ್ರದಾಯಿಕ ಇತಿಹಾಸ ಕತೆಯಂತೆ ಸೋಗು ಹಾಕಲು ಈ ಗ್ರಂಥ ಪ್ರಯತ್ನಿಸಿಲ್ಲ. ಆದುದರಿಂದ ಕೆಲವರು ಇದು ಪುರುಷರಿಗೆ ಅನ್ಯಾಯವೆಂದು ಹೇಳಿಕೊಳ್ಳಬಹುದು. ಮೊದಲಿಗ ಮಹಿಳಾ ಇತಿಹಾಸಕಾರರಲ್ಲಿ ಒಬ್ಬರಾದ ಮೇರಿ ರಿಟ್ಟರ್ ಬರ್ಡ್ ಅವರ ಸ್ಫೂರ್ತಿದಾಯಕ ಮಾತುಗಳು ಅದಕ್ಕೆ ಸೂಕ್ತ

ವಾದ ಉತ್ತರವಾದೀತು, "ಕೆಲವು ಕಡೆ ಹೆಚ್ಚಿನ ಒತ್ತು ಕಾಣಬಹುದೆಂದು ನನಗೆ ಗೊತ್ತು. ಆದರೆ ಒಂದೇ ಕಡೆಗೆ ನಿರ್ಬಂಧಗಳ ತೂಕ ವಾಲಿದರೆ, ಮತ್ತೊಂದು ಕಡೆ ಹೊರೆ ಇಳಿಸುವ ಅಗತ್ಯವಿದ್ದೇ ಇದೆ ಎಂಬುದು ನನ್ನ ಕ್ಷಮೆಯ ಮಾತು."

ಸ್ತ್ರೀ-ಪುರುಷರು ಒಂದೇ ರೀತಿಯಲ್ಲಿ ಸಮಸ್ಯೆ ಎದುರಿಸುವಾಗ, ಸಂಕಷ್ಟ ಅನುಭವಿಸುವಾಗ ಮಹಿಳೆಯರಿಗಾಗಿ ಪ್ರತ್ಯೇಕವಾಗಿ ಒತ್ತಾಯಿಸುವುದು ಸರಿಯಲ್ಲ ಎಂದು ವಾದಿಸುವುದೂ ಉಂಟು, ದುಡಿಮೆ ಕ್ಷೇತ್ರದಲ್ಲಿ ಸ್ತ್ರೀ-ಪುರುಷರಿಬ್ಬರೂ ಶೋಷಣೆಗೆ ತುತ್ತಾದವರೇ, ಹೀಗಾಗಿ ಪ್ರತ್ಯೇಕತೆ ಏಕೆ ಎಂದು ಕೇಳುವವರಿದ್ದಾರೆ, ಆದರೆ ಸ್ತ್ರೀ-ಪುರುಷರ ಬದುಕಿನ ದೃಷ್ಟಿಯಲ್ಲಿ ಆ ವಾದಕ್ಕೆ ಪುಷ್ಟಿಯೇ ಇಲ್ಲ. ಎಷ್ಟೇ ಬಡವನಾದರೂ ಕೃಷಿಕನೊಬ್ಬ ಸದಾ ತನ್ನ ಹೆಂಡತಿಯನ್ನು ಹೊಡೆಯುವ ಹಕ್ಕು ಪಡೆದಿರುತ್ತಾನೆ ; ಕಪ್ಪು ಪುರುಷ ಜೀತದಾಳೊಬ್ಬ ಇಡೀ ದಿನ ತನ್ನ ಮಾಲೀಕನಿಗಾಗಿ ದುಡಿಯುತ್ತಾನೆ, ಆದರೆ ರಾತ್ರಿ ಅವನ ಸೇವೆ ಮಾಡಬೇಕಾಗಿರುವುದಿಲ್ಲ, ಜತೆಗೆ ಸಾಮಾಜಿಕ ಸ್ಥಿತಿಗತಿಯ ಬದಲಾವಣೆಗಳು ಸ್ತ್ರೀ-ಪುರುಷರ ಬದುಕಿನ ಮೇಲೆ ಒಂದೇ ರೀತಿಯ ಪರಿಣಾಮ ನೀಡಲಿಲ್ಲ ಎಂಬುದೂ ಸತ್ಯ. 19ನೇ ಶತಮಾನದಲ್ಲಿ ಯೂರೋಪ್ ಅಮೇರಿಕದಲ್ಲಿ ಉಂಟಾದ ಕೈಗಾರಿಕಾ ಕ್ರಾಂತಿಯು ಎಷ್ಟೋ ಮಂದಿಯ ಬದುಕಿನ ಐಹಿಕ ಗುಣಮಟ್ಟವನ್ನು ಸುಧಾರಿಸಿತು, ಅದು ಅತ್ಯಂತ ಭಯಂಕರವಾದ ಬಳಕೆದಾರರ ತತ್ವವನ್ನು ರೂಪಿಸಿತಷ್ಟೇ ಅಲ್ಲ ಅದರ ಮೇಲೆ ಅವಲಂಬಿತವಾಯಿತು ಕೂಡ. ಈ ವ್ಯವಸ್ಥೆಯು 20ನೇ ಶತಮಾನದಲ್ಲಿ ಮಹಿಳೆಯನ್ನು ಅಪಮೌಲ್ಯಗೊಳಿಸಿತು.

ಆದುದರಿಂದ ಎಶ್ವದ ಭವಿಷ್ಯವು ಭೂತಕಾಲಕ್ಕಿಂತ ಉತ್ತಮವಾಗಿರಬೇಕು, ಭವಿಷ್ಯದ ಹಾದಿ ಹುಡುಕುವಾಗ ಭೂತಕಾಲವನ್ನು ಅರ್ಥ ಮಾಡಿಕೊಳ್ಳುವುದು ತುಂಬಾ ಮುಖ್ಯ, ಲಾರ್ಡ್ ಆಕ್ಟನ್ ಹೇಳಿದಂತೆ "ತತ್ವಶಾಸ್ತ್ರಕ್ಕಿಂತ ಇತಿಹಾಸವು ಹೆಚ್ಚು ಜನರಿಗೆ ಮನದಟ್ಟು ಮಾಡಿಕೊಡುತ್ತದೆ" ಇತಿಹಾಸಕಾರರು ಎಲ್ಲ ರೀತಿಯ ವಿವರಣೆ ನೀಡುತ್ತಾರೆ. ಒಂದು ಶಕೆಯಿಂದ ಮತ್ತೊಂದಕ್ಕೆ ಅದು ಮಾರ್ಗದರ್ಶನ. ಅದು ವಿಕೃತಗೊಂಡರೆ ಅದು ನಮ್ಮನ್ನು ದಿಕ್ಕು ತಪ್ಪಿಸುತ್ತದೆ, ಎಲ್ಲಾ ಕಾಲದಲ್ಲಿಯೂ ಮಹಿಳೆಯರು ಸಮರ್ಥರಾಗಿದ್ದರು ಮತ್ತು ಪ್ರಮುಖರಾಗಿಯೇ ಇದ್ದರು. ಇದನ್ನು ಅರ್ಥಮಾಡಿಕೊಳ್ಳದಿದ್ದರೆ ಅದು ನಮ್ಮ ನಾಶವೇ ಸರಿ. ಮಹಿಳೆಯರ ಸ್ಥಾನವನ್ನು ನಿರ್ಲಕ್ಷಿಸಿದರೆ ಪುರುಷರಿಗೂ ಇತಿಹಾಸ ಏನೂ ಅರ್ಥ ನೀಡಲಾರದು. ಹಿಂದಿನಂತೆ ಏಕಮುಖ ಅಭಿಪ್ರಾಯ, ನಿರ್ಧಾರಗಳನ್ನು ಒಪ್ಪಿಕೊಳ್ಳಲಾಗದು,

ಇತಿಹಾಸ ಕಲಿಸಿದ ಪಾಠದಿಂದ ಜನರು ಪಾಠ ಕಲಿಯುವವರೆ ? ಎಲ್ಲರಿಗೂ ಪೂರ್ಣ ಮಾನವೀಯತೆಯ ಸಮಾಜ ಅಗತ್ಯವೆಂದು ಆದರ್ಶದತ್ತ ಸಾಗಲು ಪುರುಷರೂ ಜಿಗುಟಿನ ಪಿತೃ ಪ್ರಧಾನ್ ಸಂಪ್ರದಾಯಗಳನ್ನು ಕಿತ್ತೊಗೆಯಲಿ ಸಿದ್ಧರಾಗಬೇಕು, ಅದೇ ರೀತಿ ಮಹಿಳೆಯರು ಸಾರ್ವಜನಿಕವಾಗಿ ಸಂಘಟನೆಯ ಜವಾಬ್ದಾರಿ ಅರಿತು ಅದರ ಹೊಣೆ ಹೊರುವಂತಾಗಬೇಕು. ಖಾಸಗಿಯಾಗಿ ಪುರುಷರನ್ನು ತಮ್ಮ ಸಂಗಾತಿಗಳಂತೆ ಪ್ರೀತಿಸಬೇಕು. ಇಲ್ಲಿ ಯಾರಿಗೂ ಯಾರೂ ಅಡಿಯಾಳಲ್ಲ ಎಂಬ ಭಾವನೆ ಮುಖ್ಯ. ಇತಿಹಾಸ ರೂಪಿಸಲು ಸ್ತ್ರೀ-ಪುರುಷರಿಬ್ಬರೂ ಸಮಾನವಾಗಿ ಮುಖ್ಯ, ಪರಸ್ಪರರ ಸಹಕಾರ ಮತ್ತು ಸಹಯೋಗವೇ ಭವಿಷ್ಯದ ಆಶಾಕಿರಣ.

(2ನೇ ಪುಟದಿಂದ)

ಡಾ|| ನಳಿನಿಮೂರ್ತಿ ತಮ್ಮ ವೈಜ್ಞಾನಿಕ ಲೇಖನಗಳಿಂದ ಕಥೆ. ಕಾದಂಬರಿಗಳಿಂದ ಕನ್ನಡಿಗರಿಗೆ ಚಿರಪರಿಚಿತರು. ಬಿಸಿಲು ಮಳೆ, ಬೀಸಿಬಂದ ಬಿರುಗಾಳಿ, ಗಣಕ ಯಂತ್ರ ಎಂದರೇನು, ಗಣಕ ಯಂತ್ರದ ಕಥೆ, ಬಂಗಾರದ ಜಿಂಕೆ, ಊರ್ಮಿಳಾ, ಮುಂತಾದ ರಚನೆಗಳ ಮೂಲಕ ಬರಹಗಾರ್ತಿಯೆನಿಸಿಕೊಂಡ ನಳಿನಿ ಮೂರ್ತಿಯವರ ಪ್ರತಿಭೆಯ ಇನ್ನೊಂದು ಮುಖ ಅವರು ಇಂಜಿನಿಯರ್‌ರಂಗದಲ್ಲಿ ಗಳಿಸಿದ ಯಶಸ್ಸು.

1957 ರಷ್ಟು ಹಿಂದೆಯೇ ಇಂಜನಿಯರಿಂಗ್ ರಂಗವನ್ನು ಆಯ್ದುಕೊಂಡ ನಳಿನಿಮೂರ್ತಿ ಹಲವಾರು ಪ್ರಥಮಗಳನ್ನು ಹಾಡಿದವರು. ಇಂಗ್ಲೆಂಡಿನ ಮ್ಯಾಂಚೆಸ್ಟರ್ ವಿಶ್ವವಿದ್ಯಾಲಯದ ಮೊದಲ ಪ್ರತಿಭಾವಂತ ಇಂಜಿನಿಯರಾಗಿ ಪದವೀಧರೆಯೆನಿಸಿಕೊಂಡರು. ನಂತರ ಕೆನಡಾದ ಹಾಲಿಫಾಕ್ಸ್ ವಿಶ್ವವಿದ್ಯಾಲಯದಲ್ಲಿ ಪಿ.ಎಚ್.ಡಿ. ಪಡೆದ ಮೊದಲ ಹೆಣ್ಣು ನಳಿನಿಮೂರ್ತಿ. ಕೆನಡಾದ Prcfessional Engineers Association ನಲ್ಲಿ 1970 ರಲ್ಲಿ ನಳಿನಿಮೂರ್ತಿಯವರು ಅದರ ಸದಸ್ಯತ್ವವನ್ನು ಪಡೆದಾಗ, ಹದಿನೈದು ವರ್ಷಗಳ ಇತಿಹಾಸವಿದ್ದ ಆ ಸಂಸ್ಥೆಯ ಮೊದಲ ಮಹಿಳಾ ಸದಸ್ಯೆಯೆನಿಸಿಕೊಂಡವರು. ಮದುವೆ, ಮಕ್ಕಳು, ಕುಟುಂಬದ ಜವಾಬ್ದಾರಿಯೆಲ್ಲವನ್ನೂ ಯಶಸ್ವಿಯಾಗಿ ನಿರ್ವಹಿಸಿಕೊಂಡು ಪ್ರತಿಭಾವಂತ ಇಂಜಿನಿಯರ್ ಎನಿಸಿಕೊಂಡ ಡಾ|| ನಳಿನಿಮೂರ್ತಿ ತಮ್ಮ ಕಡೆಗಾಲದಲ್ಲಿ ಎಡ್‌ಮಂಟನ್ ವಿಶ್ವವಿದ್ಯಾನಿಲಯದಲ್ಲಿ ಕಂಪ್ಯೂಟರ್ ವಿಭಾಗದಲ್ಲಿ ಪ್ರೊಫೆಸರ್ ಆಗಿ ಕಾರ್ಯ ನಿರ್ವಹಿಸುತ್ತಿದ್ದರು.

ಮಹಿಳಾ ಜಾಗೃತಿ, ಮಹಿಳಾ ಚಳುವಳಿಯ ಬಗ್ಗೆ ಸ್ಪಷ್ಟವಾದ ಅಭಿಪ್ರಾಯಗಳನ್ನು ಹೊಂದಿದ್ದ ನಳಿನಿ ಮೂರ್ತಿ ಗಟ್ಟಿಯಾದ ಸ್ತ್ರೀಪರ ಧ್ವನಿಯಾಗಿದ್ದರು. 'ಅಚಲ' ಬಳಗದ ಹಿತೈಷಿಯೂ ಆಗಿದ್ದ ಅವರು ತಮ್ಮ ಶ್ರೀಮಂತ ಅನುಭವದಿಂದ ಅಗಾದ ಬುದ್ಧಿ ಮತ್ತೆಯಿಂದ ಎಲ್ಲರ ಅಭಿಮಾನಕ್ಕೆ ಪಾತ್ರರಾಗಿದ್ದರು. ಅಕ್ಟೋಬರ್ 20 ರಂದು ಹೃದಯಾಘಾತದಿಂದ ಕೊನೆಯುಸಿರೆಳೆದ ಡಾ|| ನಳಿನಿಮೂರ್ತಿಯವರ ಸಾವು ಭಾರವಾದ ನೋವಿನ ಛಾಯೆಯನ್ನು ಬಿಟ್ಟಿದೆ. ಇಷ್ಟೊಂದು ಅಖಂಡ ಪ್ರತಿಭೆಯನ್ನು ಬೆಳಗಿ, ಹಠಾತ್ತನೆ ನಂದಿಹೋದ ಸ್ನೇಹ ಜೀವಿ ನಳಿನಿಮೂರ್ತಿಯವರ ನೆನಪಿಗೆ ಅಚಲಾ ಶ್ರದ್ಧಾಂಜಲಿಯನ್ನು ಅರ್ಪಿಸುತ್ತದೆ.

---

## ಸಂಬಳದ ಚಾಕರಿಗೆ ಮಾತ್ರ ಅನುಮತಿ !

ವಿವಾಹಿತ ಮಹಿಳೆಯರು ನೌಕರಿಗೆ ಸೇರುವ ಮುನ್ನ ತಮ್ಮ ಗಂಡಂದಿರ ಅನುಮತಿ ಪಡೆಯಬೇಕು ಎಂದು ಟರ್ಕಿಯ ಸಂವಿಧಾತ್ಮಕ ಕಾನೂನು ಹೇಳುತ್ತದೆ. 1926 ರಲ್ಲಿ ಜಾರಿಗೆ ಬಂದ ಟರ್ಕಿಯ ಈ ಕಾನೂನು ವಿಶೇಷ ಸಂದರ್ಭಗಳಲ್ಲಿ ಮಾತ್ರ ವಿವಾಹಿತ ಮಹಿಳೆಯರು ನೌಕರಿಗೆ ಸೇರುವುದಕ್ಕೆ ಕಾನೂನಿನ ಅನುಮತಿ ಪಡೆಯಲು ಅವಕಾಶವಿದೆ ಎಂದು ಹೇಳುತ್ತದೆ. ಹಾಡುಗಾರಳೊಬ್ಬಳು ಸಭೆಯಲ್ಲಿ ಹಾಡಬೇಕೆಂದಾಗ ಅವಳ ಗಂಡ ಅನುಮತಿ ನಿರಾಕರಿಸಿದ್ದರಿಂದ ಅವಳು ಕೋರ್ಟಿಗೆ ಹೋಗಬೇಕಾಯಿತು, ಮತ್ತು ಕೋರ್ಟ್ ಈ ಕಾನೂನನ್ನು ಪ್ರಶ್ನಿಸಿತು.

ಹೆಂಗಸರನ್ನು ಗುಲಾಮರಂತೆ ನಡೆಸಿಕೊಳ್ಳುವುದನ್ನು ಬೆಂಬಲಿಸುವ ಈ ಕಾನೂನು ಲಿಂಗಭೇದವನ್ನು ಅತ್ಯಂತ ಕ್ರೂರ ರೀತಿಯಲ್ಲಿ ಆಚರಿಸುತ್ತದೆಂದು ಕೋರ್ಟ್ ಅಭಿಪ್ರಾಯಪಟ್ಟಿತು. ಬಹುಶಃ ಅಡಿಗೆಯ, ಮನೆಗೆಲಸದ ಮತ್ತು ಶಿಶು ಪಾಲನೆಯ ಕೆಲಸಗಳು ವೇತನ ತರುವಂತಹುದಲ್ಲವಾದ್ದರಿಂದ ಆ ಕೆಲಸಗಳಿಗೆ ಗಂಡನ ಅನುಮತಿ ಬೇಕಿಲ್ಲದಿರಬಹುದು. ಆದರೆ ಅವಿವಾಹಿತ ಮಹಿಳೆಯರ ಸ್ಥಾನಮಾನದ ಬಗ್ಗೆ ಮತ್ತು ಅವರು ನೌಕರಿಯಲ್ಲಿ ತೊಡಗಲು ಯಾರ ಅನುಮತಿ ಪಡೆಯಬೇಕು ಎಂಬುದರ ಬಗ್ಗೆ ಈ ಕಾನೂನು ಮೌನ ತಾಳುತ್ತದೆ.

ಎಕನಾಮಿಕ್ ಟೈಮ್ಸ್ ಕೃಪೆ.

---

*Regd. No. MAG (5) PRC. DECL 036/86-87*

**BOOK-POST/PERIODICALS**

**To** The Editor
Samyukta Karnataka Press
2, Residency Road
Bangalore - 560 025

If undelivered please return to :
**Jagruthi Mahila Adhyayana Kendra**
**26, 1st Main Road, Vyalikaval**
**Bangalore-560 003**